# ಕಾಡು ಕುದುರೆ

ಚಂದ್ರಶೇಖರ ಕಂಬಾರ

ಅಕ್ಷರ ಪ್ರಕಾಶನ ಸಾಗರ-೫೭೭ ೪೦೧ ಕರ್ನಾಟಕ ರಾಜ್ಯ

Kādu Kudure: (Drama) By Chandrasekhar Kambar, Centre of Kannada Studies Bangalore University Bangalore-560 056.

Published by Akshara Prakashana (Akshara Trust) Sagar-577401 Karnataka.

Printed at Lipi Mudrana Bangalore-560004

Pages 64+12 Price Rs.



ಮುಖಪುಟ: ಚಂದ್ರಕಾಂತ ಕುಸನೂರ

ಬೆಲೆ : ರೂಪಾಯಿ 6-00

ಮುದ್ರಣ: ಲಿಪಿ ಮುದ್ರಣ, ಬೆಂಗಳೂರು-560 004

# ಈ ನಾಟಕದ ಬಗೆಗೆ....

ಚಂದ್ರಶೇಖರ ಕಂಬಾರರು ಬಹುಮುಖ ಪ್ರತಿಭೆಯ ವ್ಯಕ್ತಿ. ಕವಿಗಳಾಗಿ, ನಾಟಕಕಾರರಾಗಿ, ಕಥೆ-ಕಾದಂಬರಿಕಾರರಾಗಿ, ವಿಮರ್ಶಕರಾಗಿ, ನಾಟಕ-ಸಿನಿಮಾ ಸಂಗೀತ ಸಂಯೋಜಕರಾಗಿ, ನಿರ್ದೇಶಕರಾಗಿ, ಗಾಯಕರಾಗಿ, ಜಾನಪದ ವಿದ್ವಾಂಸರಾಗಿ ಅವರ ಸಾಧನೆ ಗಣನೀಯವಾದುದು. ಇಷ್ಟಿದ್ದೂ ಕಂಬಾರರು ತಾವು ಕೈ ಹಾಕಿದ ಎಲ್ಲ ಕ್ಷೇತ್ರಗಳಲ್ಲೂ ಯಶಸ್ಸು ಗಳಿಸಿರುವುದೊಂದು ವಿಶೇಷ. ವಿಮರ್ಶಕರ ಮರ್ಜಿಯನ್ನು ಅಷ್ಟಾಗಿ ಹಿಡಿಯದೆ ತಾವು ಮಾಡಬೇಕೆಂದಿರುವುದನ್ನು ಮೌನವಾಗಿ ಸಾಧಿಸುತ್ತಾ ನಡೆಯುವ ಕಂಬಾರರನ್ನು ನಾನು ಸುಮಾರು ವರ್ಷಗಳಿಂದ ಸನಿಹದಿಂದ ನೋಡುತ್ತಿರುವೆನಾದರೂ ಅವರನ್ನೊಂದು ಪ್ರಮಾಣಕ್ಕೆ ಬದ್ಧರನ್ನಾಗಿಸುವುದು ನನಗಿಂದಿಗೂ ಸಾಧ್ಯವಾಗಿಲ್ಲ. ಎಲ್ಲರ ಊಹೆ, ಅಂದಾಜುಗಳನ್ನು ಮೀರಿ ಬೆಳೆಯುತ್ತಿರುವ ಕಂಬಾರರ ಕೃತಿಯೊಂದರ ಬಗೆಗೆ ಬರೆಯುವುದು ಎಷ್ಟೊಂದು ಪೇಚಿನ ಕೆಲಸವಾಗಬಹುದೆನ್ನುವುದಕ್ಕೆ ನಾನು ಇಷ್ಟೆಲ್ಲ ವಿಚಾರಗಳನ್ನು ಹೇಳಬೇಕಾಯಿತು.

ಕಂಬಾರರ 'ಕಾಡುಕುದುರೆ'ಯ ಬಗೆಗೆ ಬರೆಯಲು ನನಗಿರಬಹುದಾದ ಏಕೈಕ ಅರ್ಹತೆಯೆಂದರೆ ನಾನು ಒಬ್ಬ ಸಹೃದಯನಾಗಿ ಅವರ ರಚನೆಗಳ ಬಗೆಗೆ ಆರೋಗ್ಯಕರವಾದ ಚರ್ಚೆಯಲ್ಲಿ ತೊಡಗುತ್ತಿದ್ದುದು ಮತ್ತು ಅವರ ಈವರೆಗಿನ ನಾಟಕಗಳನ್ನೆಲ್ಲಾ ಕುತೂಹಲದಿಂದ ಗಮನಿಸುತ್ತಾ ಬಂದಿರುವುದು.

'ಕಾಡುಕುದುರೆ' ಜಾನಪದ ಪರಿಸರದಲ್ಲಿ ನಡೆಯುವ ಪ್ರೇಮಕಥೆಯೊಂದರ ನಾಟಕ ರೂಪ. ಕಂಬಾರರ ಬಹುಪಾಲು ಕವನ, ನಾಟಕಗಳಲ್ಲಿ ಮೇಲಿಂದ ಮೇಲೆ ಕಾಣಿಸಿಕೊಳ್ಳುವ ಲೈಂಗಿಕ ಪ್ರತಿಮೆಗಳು 'ಕಾಡುಕುದುರೆ'ಯಲ್ಲೂ ಇವೆ. ಶಕ್ತಿ ಮತ್ತು ಸ್ತ್ರೀಯ ಸಂಕೇತವಾಗಿ ಕಂಬಾರರು ಕಾಡುಕುದುರೆಯನ್ನು ಬಹಳಷ್ಟು ಕಡೆ ಬಳಸಿಕೊಂಡಿದ್ದಾರೆ. ಆದರೆ ಇಲ್ಲಿ ಬಳಕೆಯಾಗಿರುವ ಕಾಡುಕುದುರೆ ಒರಟುತನದಿಂದ ಕೂಡಿದ್ದರೂ ಅಖಂಡ ಸೃಷ್ಟಿಯ ಶಕ್ತಿಯುತ ಕಾಮಕ್ಕೆ ಸಂಕೇತವಾಗಿದೆ. ಪ್ರೇಮ ಮತ್ತು ಕಾಮಗಳ ನಡುವಿನ ಅಂತರ ಗೆರೆಯೆಳೆದು ಬೇರ್ಪಡಿಸಲಾಗದಷ್ಟು ಸೂಕ್ಷ್ಮವಾಗಿರುವುದರಿಂದ 'ಕಾಡುಕುದುರೆ'ಯನ್ನು ಒಂದು ಕಾಮದ ಕಥೆಯಾಗಿ ಭಾವಿಸಲೂ ಸಾಧ್ಯವಿದೆ. ಇಲ್ಲಿ ಬರುವ ಹುಲಿಗೊಂಡ ಬಡವ. ಅವನಿಗೆ ಒಂದು ಹುಡುಗಿಯ ಮೇಲೆ ಕಣ್ಣು ಬಿದ್ದು, ಆರ್ಥಿಕ ಕಾರಣಗಳಿಂದಾಗಿ ಅವಳನ್ನು

ಮದುವೆಯಾಗುವುದು ಸಾಧ್ಯವಾಗದೇ ಹೋಯಿತು. ಅವಳಿಗೆ ಬದಲು ರೋಗಿಷ್ಠೆಯಾಗಿದ್ದ ಅವಳಕ್ಕನನ್ನು ಮದುವೆಯಾದ. ಈ ನಡುವೆ ಇವರಿಬ್ಬರ ಮತ್ತೊಬ್ಬಳು ಸಹೋದರಿ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಹುಲಿಗೊಂಡನ ಸಂಪರ್ಕ ಬಯಸಿದಳು. ಕೊನೆಗೆ ಹುಲಿಗೊಂಡ ತನ್ನನ್ನಾವರಿಸಿದ್ದ ಎಲ್ಲ ಬಂಧನಗಳನ್ನೂ ಕಿತ್ತೊಗೆದು ತನ್ನಲ್ಲಿ ಬಯಕೆಯ ಕಿಚ್ಚೆಬ್ಬಿಸಿದ್ದವಳೊಡನೆ ಸುಂದರ ಕನಸಿನ ಪ್ರಪಂಚದತ್ತ ದೌಡಾಯಿಸಿದ. —ಇದಿಷ್ಟು 'ಕಾಡುಕುದುರೆ' ನಾಟಕದ ಕಥೆ. ಕ್ಷಣಕ್ಷಣಕ್ಕೂ ಬದುಕನ್ನು ಹಿಂಡಿ ಹಿಂಸಿಸುವ ವ್ಯವಸ್ಥೆಯ ಕ್ರೂರ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಣಯಿಗಳು ನಡೆಸುವ ಮುಗ್ಧ ಹೋರಾಟವನ್ನು ಈ ನಾಟಕ ಬಿಡಿಸಿ ತೋರುತ್ತದೆ. ಸ್ವತಂತ್ರ ಬದುಕಿಗೆ, ಕನಸುಗಳ ಈಡೇರಿಕೆಗೆ, ಅಖಂಡ ಕಾಮತೃಪ್ತಿಗೆ ಹಾತೊರೆಯುವ ಗಂಡು-ಹೆಣ್ಣುಗಳು ಹಂತಹಂತವಾಗಿ ಅಸಂಗತ ಬದುಕನ್ನು ಜಾಡಿಸಿ ಒದ್ದು ಕನಸಿನ ಲೋಕಕ್ಕೆ ಪಯಣಿಸುವುದನ್ನು ಇಲ್ಲಿ ಕಾಣಬಹುದು. ಸಾವಿನ ಭೀತಿ, ಸೋಲಿನ ಅಂಜಿಕೆಯನ್ನು ಮೀರಿ ಹೊಸದಾದ ಸ್ವತಂತ್ರ ಬಾಳನ್ನು ರೂಪಿಸಿಕೊಳ್ಳುವ ಅಸ್ತಿತ್ವವಾದದ ಸಾಧ್ಯತೆ ಕಾಡುಕುದುರೆಯಲ್ಲಿದೆ. ಹಾಗಾಗಿ ಕಾಮದ ಮೂಲಕ ಕ್ರಾಂತಿಯನ್ನು ಪ್ರತಿಪಾದಿಸುವ ಮಹತ್ವದ ಉದ್ದೇಶ ಕಂಬಾರರಿಗಿರುವುದರ ಹಿನ್ನೆಲೆಯಲ್ಲೂ ಈ ನಾಟಕವನ್ನು ನೋಡಬೇಕು. ಯಾಕೆಂದರೆ ಕಾಮ ಮಾನವನ ಮೂಲ ಪ್ರವೃತ್ತಿಗಳಲ್ಲೊಂದು ಮತ್ತು ಜನಪದರ ಬದುಕು ಕಾಮಪ್ರಧಾನವಾದದ್ದು. ಕಾಮ ಬದುಕಿನ ಅನಿವಾರ್ಯ ಅಂಗವಾದ್ದರಿಂದ ಲೈಂಗಿಕತೆಯ ಎಡವಟ್ಟು, ವಿಪರ್ಯಾಸಗಳಿಂದ ಬರುವಷ್ಟು ಸಿಟ್ಟು, ರೊಚ್ಚು ಅವರಿಗೆ ಮತ್ತಾವುದರಿಂದಲೂ ಬರುವುದಿಲ್ಲ. ಕಂಬಾರರು ತಾವು ಪ್ರೀತಿಸುವ ಜನಪದರ ಜೀವನೋತ್ಸಾಹವನ್ನು, ಸೌಂದರ್ಯವನ್ನು, ಸುಖವನ್ನು, ಸತ್ಯವನ್ನು, ತಲೆತಲಾಂತರದಿಂದ ಬದಲಾವಣೆ ಕಾಣದ ಹಳ್ಳಿಯ ಬದುಕನ್ನು ತಮ್ಮ ನಾಟಕಗಳಲ್ಲಿ ಕಂಡರಿಸುತ್ತಲೇ ನಾವು ತಲುಪಬೇಕಾದ ನೆಲೆಯ ಸಾಂಕೇತಿಕ ರೂಪವನ್ನೂ ಪ್ರಕಟಪಡಿಸುತ್ತಾರೆ. 'ಜೋಕುಮಾರಸ್ವಾಮಿ'ಯಲ್ಲಿ ಸಾಮಾನ್ಯರ ಬದುಕು ಅರಳಿಕೊಳ್ಳಲು ಬಿಡದ ಕರಾಳ ವ್ಯವಸ್ಥೆಯ ವಿರುದ್ಧ ತಿರುಗಿ ಬೀಳಲು ಹುಮ್ಮಸ್ಸು ಹುಟ್ಟಿಸುವುದು ಒಂದು ಹೆಣ್ಣು. 'ನಾಯೀಕಥೆ'ಯಲ್ಲಿ ಸರ್ವಾಧಿಕಾರೀ ಪ್ರಭುತ್ವದೆದುರು ಹೋರಾಟಕ್ಕಣಿಯಾಗಲು ಪ್ರಚೋದಿಸುವುದು ಒಂದು ಹೆಣ್ಣು. ಹಾಗೆಯೇ ಕಾಡುಕುದುರೆಯಲ್ಲಿ ಸಾಮಾಜಿಕ ಬಂಧನಗಳನ್ನು ಕಿತ್ತೆಸೆಯುವ ಪ್ರಬಲ ಒತ್ತಡವಾಗಿ ಕಂಡುಬರುವುದು ಒಂದು ಹೆಣ್ಣು. ಈ ಹೆಣ್ಣಿನ ಬಳಕೆ ಮತ್ತು ಬಯಕೆಯ ಹಿನ್ನೆಲೆಯಲ್ಲಿರುವುದು ಕಾಮ. ಹೀಗೆ ಹಿಂದೆಯೇ ಹೇಳಿದಂತೆ ಕಾಮದ ಮೂಲಕ ಕ್ರಾಂತಿಯನ್ನು ಪ್ರತಿಪಾದಿಸಬೇಕೆನ್ನುವ ಕಂಬಾರರ ಮಹತ್ವದ ಉದ್ದೇಶ ನಾಟಕಗಳಲ್ಲಿ ಸುಂದರವಾಗಿ, ಕಲಾತ್ಮಕವಾಗಿ ಅರಳಿಕೊಳುವ ರೀತಿ ಮಾತ್ರ ಬೆರಗು ಹುಟ್ಟಿಸುವಂಥದ್ದು. ಅನುಭವದ ಒಟ್ಟಂದದ ಧ್ವನಿಯನ್ನು ಹಿಡಿದಿಡಬೇಕೆನ್ನುವ

ಕಂಬಾರರ ತವಕ ಬದುಕಿನ ಅನಿವಾರ್ಯ ಹಾಗೂ ಸ್ವಾಭಾವಿಕ ಭಾಗವಾಗಿಯೇ ಕಾಮವನ್ನೂ ಚಿತ್ರಿಸುತ್ತದೆ.

ನಾಟಕದಲ್ಲಿ ಹುಲಿಗೊಂಡ ಕೈ ಹಿಡಿಯಬೇಕಾಗಿ ಬಂದದ್ದು ಪಾರೋತಿಯನ್ನು. ಆದರೆ ಅವನ ಮನವನ್ನು ಹುಚ್ಚೆಬ್ಬಿಸಿದ್ದವಳು ಪಾರೋತಿಯ ಕಿರಿಯ ಸೋದರಿಯಾದ ಚಂಪಿ. ತನ್ನಕ್ಕನ ಗಂಡನೊಂದಿಗೇ ಸಂಬಂಧವಿರಿಸಿಕೊಳ್ಳುವ ಚಂಪಿಯ ಕಾಮ ನಾವು ಒಪ್ಪಿಕೊಂಡು, ಅನುಸರಿಸಿಕೊಂಡು ಬರುತ್ತಿರುವ ಸಾಮಾಜಿಕ ಮೌಲ್ಯಗಳ ದೃಷ್ಟಿಯಿಂದ ಅಸಹಜವಾದರೂ ಅದರ ಹಿಂದಿರುವ ದೇಹ-ಮನಸ್ಸುಗಳ ಅಪೇಕ್ಷೆ, ಮಾನವೀಯ ಒತ್ತಡ—ಇವುಗಳನ್ನು ತಿರಸ್ಕರಿಸುವಂತಿಲ್ಲ. ಇಲ್ಲಿ ಶೀಲಕ್ಕನ ಸ್ಥಿತಿ ಪಾರೋತಿ ಮತ್ತು ಚಂಪಿಯರಿಗಿಂತ ಭಿನ್ನವಾದದ್ದು. ಅವಳು ಪಾರೋತಿಯಂತೆ ಶಾಸ್ತ್ರೋಕ್ತವಾಗಿ ಹುಲಿಗೊಂಡನ ಕೈಹಿಡಿದವಳಲ್ಲ, ಚಂಪಿಯಂತೆ ಹುಲಿಗೊಂಡನನ್ನು ಹುಚ್ಚೆಬ್ಬಿಸಿದವಳೂ ಅಲ್ಲ. ವಯಸ್ಸಿನಲ್ಲಿ ಚಂಪಿಗಿಂತ ಹಿರಿಯಳಾದರೂ ಅಷ್ಟೇನೂ ಸುಂದರಿಯಲ್ಲದ ಶೀಲಕ್ಕನಿಗೆ ಮದುವೆಯ ಭಾಗ್ಯ ಕೂಡಿಬರಲಿಲ್ಲ. ಹಾಗೆಂದು ಯೌವ್ವನ ಪ್ರೇರಿಸುವ ದೇಹದ ಅದಮ್ಯ ಬಯಕೆಗಳನ್ನು ಹತ್ತಿಕ್ಕಿ ಅನ್ಯಾಯ ಮಾಡಿಕೊಳ್ಳುವ ಮನಸ್ಸೂ ಅವಳಿಗಿಲ್ಲ. ಭಾವನೊಂದಿಗೆ ಕೂಡುವ ಯಾವುದೇ ಅವಕಾಶವನ್ನೂ ಅವಳು ವ್ಯರ್ಥಮಾಡಿಕೊಳ್ಳಲು ಬಯಸುವುದಿಲ್ಲ. ಸಂಪ್ರದಾಯಕ್ಕೆ ಕಟ್ಟುಬಿದ್ದು ಮನುಷ್ಯ ಸಂಬಂಧಗಳ ಸೂಕ್ಷ್ಮತೆಯನ್ನು ಗ್ರಹಿಸದ ಪಾರ್ಶ್ವವಾಯು ಪೀಡಿತ ಮನಸ್ಸಿಗೆ ಹುಲಿಗೊಂಡ-ಚಂಪಿಯರ ಸಂಬಂಧ ವ್ಯಭಿಚಾರವಾಗಿಯೋ ಅನೈತಿಕ ವ್ಯವಹಾರವಾಗಿಯೋ ಕಾಣಬಹುದು. ಹಾಗಾದಾಗ ಅಂಥ ಸಂಬಂಧವನ್ನು ಒಂದು ಸಮಸ್ಯೆಯಾಗಿ ಪರಿಭಾವಿಸಿ, ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲೇ ಆ ಸಮಸ್ಯೆಯ ಬೇರುಗಳು ಆಳವಾಗಿ ಊರಿಕೊಂಡಿರುವುದನ್ನು ಪರಿಶೋಧಿಸುವ ಅವಕಾಶ ತಪ್ಪಿಹೋಗುತ್ತದೆ.

ಊರಿಗೆಲ್ಲಾ ಸಿಂಹಸ್ವಪ್ನವಾಗಿರುವ ಗೌಡ್ತಿಯ ಮನೆಯಲ್ಲೇ ಈ ಸಂಬಂಧಗಳು ತೆರೆಮರೆಯಲ್ಲಿ ಏರ್ಪಡುತ್ತಾ, ಖಚಿತವಾಗುತ್ತಾ ಹೋಗುತ್ತಿದ್ದಂತೆ ಊರಲ್ಲೂ ಅದಕ್ಕೆ ಸಂವಾದಿಯಾದ ಘಟನೆಗಳು ಜರುಗುತ್ತಿರುತ್ತವೆ. ಅವುಗಳಲ್ಲಿ ಕೊಮಾಲಿಯ ಪ್ರಸಂಗವನ್ನು ನೋಡಬಹುದು : ಕೊಮಾಲಿ ನಿಸರ್ಗದ ಅತ್ಯಂತ ಸಹಜ ಭಾಗ. ಆದ್ದರಿಂದಲೇ ಕಾಡುಕುದುರೆ ಉಳಿದೆಲ್ಲರಂತೆ ಅವಳನ್ನು ಕಾಡಿಸುವುದಿಲ್ಲ. ಸಲೀಸಾಗಿ ಅದನ್ನು ಹತ್ತಿ ಗಂಡನ ಮನೆಯಿಂದ ಅವಳು ಪಾರಾಗಿ ಬರಬಲ್ಲಳು. ಸಾಮಾಜಿಕವಾಗಿ ಕೆಳ ಅಂತಸ್ತಿನಲ್ಲಿರುವ ಕೊಮಾಲಿಯನ್ನು ಸಮಾಜದ ಕಟ್ಟುಪಾಡುಗಳು, ನೀತಿ ನಿಯಮಾವಳಿಗಳು ಅಷ್ಟಾಗಿ ಹಿಂಸಿಸುವುದಿಲ್ಲ. ಆಕಳಂಥ ಗಂಡನಿಂದ ತಾನು ನಿರೀಕ್ಷಿಸಿದ ಸುಖ ದೊರೆಯಲಿಲ್ಲವೆಂದಾಗ ಅಂಥವನ ಸಂಬಂಧವನ್ನು ಕಡಿದುಕೊಳ್ಳುವುದಕ್ಕೂ ಅವಳು ಹಿಂಜರಿಯುವುದಿಲ್ಲ. ತನಗೆ ಬೇಕಾಗಿರುವ ಹೋರಿ

ಯಂಥವನನ್ನು ಪಡೆಯುವುದಕ್ಕಾಗಿ ವ್ಯವಸ್ಥೆ ಒದಗಿಸುತ್ತೇನೆಂದು ಹೇಳುವ ಹುಸಿ ಸವಲತ್ತುಗಳನ್ನು ಧಿಕ್ಕರಿಸುವುದಕ್ಕೂ ಸಿದ್ಧಳಾಗುತ್ತಾಳೆ. ದಕ್ಕಿದಷ್ಟು ನೈಸರ್ಗಿಕ ಸುಖವನ್ನು ಬಾಚಿಕೊಳ್ಳಬೇಕೆನ್ನುವ ಅವಳು ಅದಕ್ಕೆ ತೊಡಕುಂಟುಮಾಡುವ ಅಸಂಗತ ಬಂಧನಗಳನ್ನು ಕಿತ್ತೊಗೆಯುತ್ತಾಳೆ. ಆದರೆ ವ್ಯವಸ್ಥೆಯ ಹಿಡಿತದಲ್ಲಿ ಬಲವಾಗಿ ಸಿಲುಕಿಕೊಂಡಿದ್ದು ಅದರ ಒಂದು ಭಾಗವೇ ಆಗಿರುವ, ನಿಸರ್ಗದಿಂದ ವಂಚಿತರಾಗಿರುವ ಶೀಲಕ್ಕ, ಚಂಪಿಯರಿಗೆ ಈ ಸ್ವಾತಂತ್ರ್ಯವಿಲ್ಲ. ನಮ್ಮೆಲ್ಲ ಸ್ವಾತಂತ್ರ್ಯ ಮತ್ತು ವ್ಯಕ್ತಿತ್ವಗಳನ್ನು ನುಂಗಿ ನೊಣೆಯುವ ಈ ಜಡ್ಡುಗಟ್ಟಿದ ವ್ಯವಸ್ಥೆಯ ವಿರುದ್ಧದ ಸಮರಕ್ಕೆ ಶೀಲಕ್ಕ, ಚಂಪಿಯರು ಸಂಕೇತ ಮಾತ್ರ ಆಗುತ್ತಾರೆ. ಅರ್ಥಪೂರ್ಣ ಬದಲಾವಣೆಗೆ ಅಥವಾ ಸುಸಂಗತ ಗುರಿಯಿರಿಸಿಕೊಂಡ ಕ್ರಿಯೆಗೆ ವ್ಯವಸ್ಥೆ ಹೇಗೆ ಮಣಿಯಬಲ್ಲದೆಂಬುದಕ್ಕೆ ಹುಲಿಗೊಂಡ-ಚಂಪಿಯರತ್ತ ಗೌಡ್ತಿ ಹಾರಿಸುವ ಗುಂಡೂ ಗುರಿತಪ್ಪುವಲ್ಲಿ ಸಾಂಕೇತಿಕ ಸಾಕ್ಷಿಯೊದಗಿಸುತ್ತದೆ. ನಮ್ಮ ಸಾಮಾಜಿಕ ವ್ಯವಸ್ಥೆ ಎಷ್ಟೊಂದು ಅರ್ಥಹೀನವಾಗಿ, ಘೋರವಾಗಿ ನಮ್ಮನ್ನು ಕಾಡುತ್ತದೆನ್ನುವುದಕ್ಕೆ ನಾಟಕದಲ್ಲೇ ನಿದರ್ಶನಗಳು ಸಿಗುತ್ತವೆ. ಹುಲಿಗೊಂಡ ತಾನು ಮೆಚ್ಚಿದ ಚಂಪಿಯನ್ನು ಮದುವೆಯಾಗುವಂತಿಲ್ಲ. ಆಸ್ತಿಯ ಹಕ್ಕು, ಗೌಡಿಕೆ ಹಿರಿಯಳಾದ ಪಾರೋತಿಯ ಪಾಲಿಗಿರುವುದರಿಂದ ಚಂಪಿಯನ್ನು ಮದುವೆಯಾದರೆ ಆ ಅಧಿಕಾರಗಳು ಪ್ರಾಪ್ತವಾಗುವುದಿಲ್ಲ. ಅಧಿಕಾರದ ಹಂಬಲ ವನ್ನು ತಿರಸ್ಕರಿಸಿ ಚಂಪಿಯನ್ನು ಕೈಹಿಡಿಯೋಣವೆಂದರೆ ಅವನ ಮೇಲೇ ಭರವಸೆ ಯಿರಿಸಿ ತಮ್ಮ ಬಡತನ ಯಾವಾಗ ನೀಗೀತು ಎಂದು ದೈನ್ಯವಾಗಿ ಕಾಯುತ್ತಿರುವ ತಂದೆತಾಯಿಗಳ ಕಡೆಯಿಂದ ಒತ್ತಡವಿದೆ. ಒಂದು ಬಾರಿ ಮದುವೆಯ ಶಾಸ್ತ್ರ ಮುಗಿಯಿತೆಂದರೆ ಕುರುಡಿಯೋ ಕುರೂಪಿಯೋ ರೋಗಿಯೋ ಏನೇ ಆಗಿರಲಿ ಹೆಂಡತಿಯಾದವಳಿಗೆ ನಿಷ್ಠೆಯಿಂದ ನಡೆದುಕೊಳ್ಳಬೇಕೆಂದು ಸಮಾಜ ಬಯಸುತ್ತದೆ ಮತ್ತು ವಿಧಿಸುತ್ತದೆ. ವೈಯಕ್ತಿಕ ಬೇಡಿಕೆ, ಬಯಕೆಗಳಿಗೆ ಅಲ್ಲಿ ಬೆಲೆಯಿಲ್ಲ. ವ್ಯವಸ್ಥೆಯ ಈ ಹೇರಿಕೆ ನಮ್ಮನ್ನು ಕ್ಷಣಕ್ಷಣಕ್ಕೂ ಹಿಂಸಿಸುವ, ದಯನೀಯವಾಗಿಸುವ ಕೆಲಸವನ್ನು ಬಹು ನಾಜೂಕಾಗಿ ಮಾಡುತ್ತಿರುತ್ತದೆ. ಈ ಸಮಸ್ಯೆಯ ಬೇರು ಗಳನ್ನು ಅಲ್ಲಾಡಿಸುವ ಹೋರಾಟ ಕಾಡುಕುದುರೆಯಲ್ಲಿ ಹಂತಹಂತವಾಗಿ ನಿರೂಪಿತ ವಾಗಿದೆ. ಕಟುವಾಸ್ತವ ಮತ್ತು ಸುಂದರ ಆದರ್ಶಗಳ ನಡುವಿನ ಹೋರಾಟದ ಆಶಯವನ್ನು 'ಕಾಡುಕುದುರೆ' ಹೊಂದಿದೆ. ಜನಸಮುದಾಯವನ್ನೊಳಗೊಂಡೂ ಅವರ ಮೂಲಕವೇ ಬದುಕನ್ನು ಶೋಧಿಸಿ, ಜನನಾಡಿಯನ್ನು ಮಿಡಿಯುವ ಧೋರಣೆಯುಳ್ಳವರಾದುದರಿಂದ ಕಂಬಾರರು ಸಾಮಾನ್ಯರಿಗೆ ಹತ್ತಿರದ ಕವಿಯಾಗು ತ್ತಾರೆ, ನಾಟಕಕಾರರಾಗುತ್ತಾರೆ.

ಕಾಡುಕುದುರೆಯ ಪಾತ್ರಪೋಷಣೆ ಸತ್ವಯುಕ್ತವಾಗಿದೆ. ಇಲ್ಲಿನ ಎಲ್ಲ ಪಾತ್ರ ಗಳಿಗೂ ತಮ್ಮ ತಮ್ಮ ಮಿತಿಯ ಅರಿವಿದೆ. ನಾಟಕದ ಕಕ್ಷೆಯಿಂದ ಹೊರನಿಲ್ಲುವ

ಯಾವ ಪಾತ್ರವೂ ಇಲ್ಲಿಲ್ಲ. ಹುಲಿಗೊಂಡ ಈ ನಾಟಕದ ನಾಯಕನಾದರೂ ಅವನು ರಂಗದ ಮೇಲೆ ಕಾಣಿಸಿಕೊಳ್ಳುವುದು ಮತ್ತು ಮಾತಾಡುವುದು ತೀರಾ ಕಡಿಮೆ. ಚಂಪಿ ಎದುರಾದಾಗ ಮಾತ್ರ ಅವನಿಗೆ ಬಿಚ್ಚಿಕೊಳ್ಳುವ ತವಕವಿದೆ. ಹತ್ತು ಮಾತಾಡುವ ಕಡೆ ಅವನು ಒಂದೇ ಮಾತಾಡುತ್ತಾನೆ. ಆ ಮಾತುಗಳಲ್ಲೂ ವ್ಯವಸ್ಥೆಯ ಕ್ರೌರ್ಯದ ಬಗೆಗಿನ ನೋವು, ಅದರ ಹಿಂಸೆಯ ವಿರುದ್ಧ ಸೆಟೆಯುವ ರೋಷ, ಅದರಿಂದ ಬಿಡುಗಡೆ ಹೊಂದಬೇಕೆನ್ನುವ ಕಾತರ ಮಾತ್ರ ವ್ಯಕ್ತವಾಗುತ್ತದೆ. ಅವನು ರಂಗದ ಮೇಲೆ ಕಾಣಿಸಿಕೊಳ್ಳುವುದು ಅಪರೂಪವಾದರೂ ಅವನ ವ್ಯಕ್ತಿತ್ವದ ನೆರಳು, ಅವನ ಕ್ರಿಯೆಯ ಪರಿಣಾಮ ಉಳಿದ ಪಾತ್ರ–ಪ್ರಸಂಗಗಳ ಮೇಲೆ ಕವಿದು ಕೊಂಡಿರುವುದನ್ನು ಗುರುತಿಸಬಹುದು. ವ್ಯವಸ್ಥೆಯ ಎಲ್ಲ ಕ್ರೌರ್ಯಗಳನ್ನೂ ಜೀವಂತವಾಗಿ ಮೈಗೂಡಿಸಿಕೊಂಡ ಪಾತ್ರ ಗೌಡ್ತಿಯದು. ಬೇರೆಯವರ ಹಿತವಾದ ವನ್ನು ಕೇಳದ, ತಾನು ಹೇಳಿದ್ದೇ ಸರಿ ಎನ್ನುವ, ಅದು ನಡೆದೇ ತೀರಬೇಕೆನ್ನುವ ಧಾರ್ಷ್ಟ್ಯದವಳು ಗೌಡ್ತಿ. ಮಾನವೀಯ ಮೌಲ್ಯಗಳಿಗೆ ಅವಳಲ್ಲಿ ಬೆಲೆಯಿಲ್ಲ. ನಾಟಕದುದ್ದಕ್ಕೂ ಕಾಣಿಸಿಕೊಂಡು ತನ್ನ ಸಹೃದಯತೆಯಿಂದಾಗಿ ಎಲ್ಲರ ಅನುಕಂಪ ವನ್ನೂ ಗಳಿಸಿಕೊಳ್ಳುವ ದುರ್ಗಿ ಮಾನವೀಯ ಗುಣಗಳ ಸಾಕಾರಮೂರ್ತಿ. ಒಂದು ಮನೆತನದ, ಒಂದು ಅವಧಿಯ ಇತಿಹಾಸಕ್ಕೆ ಆಕೆ ಜೀವಂತ ಸಾಕ್ಷಿ. ಅನುಭವ ಕಲಿಸಿದ ಪಾಠದಿಂದ ಅವಳಿಗೆ ಎಲ್ಲರ ಅಂತರಂಗವನ್ನೂ ಹೊಕ್ಕು ನೋಡುವ ಸಾಮರ್ಥ್ಯವಿದೆ. ತಾನು ಆ ಮನೆಯ ಅವಿಭಾಜ್ಯ ಅಂಗವೆಂಬ ಭಾವನೆ ಅವಳಲ್ಲಿ ಬೇರೂರಿದೆ. ಸದಾ ರೇಜಿಗೆಯಿಂದಲೇ ತುಂಬಿಕೊಂಡ ಆ ಸಂಸಾರವೃಕ್ಷದಲ್ಲಿ, ಹೂವು, ಮಿಡಿ, ಹಣ್ಣು ಗಳನ್ನು ಕಾಣಬೇಕೆನ್ನುವ ಕನಸಿದೆ. ಹುಲಿಗೊಂಡ, ಚಂಪಿ, ಶೀಲಕ್ಕ–ಇವರ ವರ್ತನೆ ಯಿಂದ ಮನೆತನದ ಗೌರವ ಮಣ್ಣುಪಾಲಾಗುತ್ತಿದೆ, ಅದು ಹಾಳಾಗದಂತೆ, ನಗೆಪಾಟಲಿ ಗೀಡಾಗದಂತೆ ಮಾಡಬೇಕೆನ್ನುವ ಹಂಬಲ ಅವಳಿಗಿದೆ. ಆದರೆ ಪರಿಸ್ಥಿತಿ ಕೈಮೀರಿ ಹೋದಾಗ ಅವಳು ದಿಕ್ಕು ತಪ್ಪಿದಂತಾಗಿ ಎಲ್ಲ ದುರಂತಗಳ ಮೌನ ಪ್ರೇಕ್ಷಕಳಾಗು ತ್ತಾಳೆ. ನಾಟಕದ ಆರಂಭದ ದೃಶ್ಯದಲ್ಲಿ ಅವಳು ಕೊಮಾಲಿಗೆ ಹೇಳುವ ಮುಂಗಿಯುಹ ಕಥೆ ದುರ್ಗಿಯ ಮಡುಗಟ್ಟಿದ ನೋವು ಮತ್ತು ಸದ್ಯದ ಪರಿಸ್ಥಿತಿಯ ಸ್ಪಷ್ಟ ಚಿತ್ರ ವೊಂದನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದೆ. ಕಥಾ ನಿರೂಪಣೆಯ ಭಾಗವಷ್ಟೇ ಒಂದು ಜನಪದ ಶೋಕ ಕಾವ್ಯದ ತುಂಡರಿಸಿದ ಭಾಗದಂತೆ ಭಾಸವಾಗುತ್ತದೆ. ಕರುಳು ಹಂಚಿಕೊಂಡವರಲ್ಲಿ ಹೊಗೆಯಾಡುವ ದ್ವೇಷಾಸೂಯೆಗಳು ಸೂಕ್ಷ್ಮತೆಯಿಂದ ಹೇಗೆ ತೀವ್ರಗೊಳ್ಳುತ್ತಾ ಸಾಗುತ್ತವೆನ್ನುವುದಕ್ಕೆ ಪಾರೋತಿ, ಶೀಲಕ್ಕ, ಚಂಪಿಯರ ಪಾತ್ರಗಳನ್ನು ಪರಿಶೀಲಿಸಬಹುದು. ಈ ಮೂವರಲ್ಲಿ ಪಾರೋತಿ ಮಾತ್ರ ಅಪ್ಪ ನಿಗೆ ಹುಟ್ಟಿದವಳು. ಅವಳನ್ನು ಮದುವೆಯಾದವರಿಗೆ ಮಾತ್ರ ಆಸ್ತಿ, ಗೌಡಿಕೆ ದೊರೆಯುತ್ತದೆ. ಈ ಹಮ್ಮು ಪಾರ್ವತಿಯಲ್ಲಿದೆ. ಅವಳಿಗೆ ಗಂಡಸನ್ನು ಕೆರಳಿಸು ವಂಥ ರೂಪವಿಲ್ಲ. ಜೊತೆಗೆ ಚಿಕ್ಕಂದಿನಿಂದಲೇ ಎಡೆಬಿಡದ ಕಾಡುವ ರೋಗ ಬೇರೆ,

ಹಾಗಾಗಿ ತನ್ನ ಗಂಡ ಇನ್ನೊಬ್ಬರ ವಶವಾದಾನು ಎಂದು ಸದಾ ಗುಮಾನಿಸುವ ಸ್ವಭಾವ. ಚಂಪಿ ಈ ನಾಟಕದ ನಾಯಕಿ. ಹುಲಿಗೊಂಡನನ್ನು ಒಲಿದವಳು, ತನ್ನ ಹೆಣ್ಣುತನದಿಂದ ಹುಲಿಗೊಂಡನನ್ನು ಗೆದ್ದವಳು. ಅಂತೆಯೆ ಅವನನ್ನು ಪಡೆಯುವುದು ತನ್ನ ಹಕ್ಕೆಂದು ಭಾವಿಸಿದವಳು. ಶೀಲಕ್ಕನದು ಒಂದು ತೆರನಾದ ವಿಚಿತ್ರ ಮನಸ್ಥಿತಿ. ಅಕ್ಕನ ಗಂಡನಲ್ಲಿ ಮೋಹವಿದೆ. ತನ್ನ ರೂಪವಂತ ತಂಗಿ ಅವನೊಡನಿರಿಸಿಕೊಂಡಿರುವ ಸಂಬಂಧದ ಬಗೆಗೆ ಅಸೂಯೆಯಿದೆ. ಈ ಮೋಹ–ಅಸೂಯೆಗಳ ದಳ್ಳುರಿಯಲ್ಲಿ ಬೆಂದ ಅವಳು ಅಕ್ಕತಂಗಿಯರ ಮೇಲೆ ರೋಷ ಕಾರುವ ಸ್ಥಿತಿಗೆ ತಲುಪುತ್ತಾಳೆ. ಕೊಮಾಲಿಯದು ಬದುಕಿನ ಜೀವಂತಿಕೆಗೆ ಸಾಕ್ಷಿಯಾಗಿ ನಿಲ್ಲುವ ಪಾತ್ರ. ಅವಳಿಗೆ ಬೇಕಾಗಿರುವುದು ಬದುಕಿನ ಸುಖ. ಅದನ್ನು ದೊರಕಿಸಿಕೊಳ್ಳುವುದಕ್ಕಾಗಿ ಅವಳು ಯಾವುದೇ ಬಗೆಯ ಸಾಹಸಕ್ಕಾದರೂ ಕೈ ಹಾಕ ಬಲ್ಲಳು. ಸಾಮಾಜಿಕ ಕಟ್ಟುಪಾಡುಗಳನ್ನು, ವ್ಯವಸ್ಥೆಯ ಅಸಂಗತೆಯನ್ನು ಮೀರುವ ಅವಳ ಕೆಚ್ಚು ನಮಗೆ ಸಾಹಸವಾಗಿ ತೋರಬಹುದಾದರೂ ಅವಳಿಗದು ನಿಜವಾದ ಬದುಕಿನತ್ತ ಚಲಿಸುವ ಸಹಜ ಕ್ರಿಯೆ ಮಾತ್ರ. ತಾನು ವಿಧ್ಯುಕ್ತವಾಗಿ ತಾಳಿ ಕಟ್ಟಿದವನೊಬ್ಬನಿಗೆ ಬಸುರಾಗಿದ್ದೇನೆ, ಸಮಾಜ ವಿಧಿಸಿರುವ ನೈತಿಕ ನಿಯಮಗಳನ್ನು ಮೀರಿದ್ದೇನೆ, ಊರಿನಿಂದ ಬಹಿಷ್ಕೃತಳಾಗಿದ್ದೇನೆ, ಬಂಧುಬಳಗದಿಂದ ದೂರ ವಾಗುತ್ತಿದ್ದೇನೆ—ಎನ್ನುವ ವಿಚಾರಗಳು ಅವಳನ್ನೆಲ್ಲಿಯೂ ಕಾಡುವುದಿಲ್ಲ. ಹಣ, ಅಧಿಕಾರ, ಪ್ರತಿಷ್ಠೆಗಳ ಮರೆಯಲ್ಲಿ ಸುಖ, ಸಂತೃಪ್ತಿಗಳಿಂದ ವಂಚಿತರಾಗಿ ಎದೆಯ ಹುಣ್ಣನ್ನು ಸದಾ ಕಾಪಾಡಿಕೊಳ್ಳುವವರನ್ನು ಆಕೆ ತುಚ್ಛೀಕರಿಸುತ್ತಾಳೆ. ಹೀಗೆ ಉಳಿದೆಲ್ಲರ ವ್ಯಕ್ತಿತ್ವಶೋಧನೆಗೆ ಪ್ರೇರಣೆಯಾಗುವ ಕೊಮಾಲಿಯ ಪಾತ್ರ ವಿಶಿಷ್ಟ ಬಗೆಯದಾಗಿದೆ.

ಸ್ವಚ್ಛಂದತೆಯ ಸಂಕೇತವಾಗಿ 'ಕಾಡುಕುದುರೆ'ಯ ವ್ಯಾಪ್ತಿಯನ್ನು ಮತ್ತಷ್ಟು ದೂರ ಕೊಂಡೊಯ್ಯಬಹುದು. ದುರ್ಗಿಯೊಬ್ಬಳ ಹೊರತಾಗಿ ಈ ನಾಟಕದಲ್ಲಿ ಕಾಣಿಸಿಕೊಳ್ಳುವ ಎಲ್ಲ ಪ್ರಧಾನ ಪಾತ್ರಗಳೂ ಕಾಡುಕುದುರೆಗಳೇ. ಅವರೆಲ್ಲರಿಗೂ ಕ್ಷಣ ಚಿತ್ತ. ಕ್ಷಣ ಪಿತ್ಥ. ಸ್ವಲ್ಪ ವ್ಯತ್ಯಾಸಗೊಂಡರೂ ಹುಚ್ಚು ಕೆರಳಿದವರಂತೆ ಒಬ್ಬರನ್ನೊಬ್ಬರು ಮಾತಿನ ಮೊನೆಯಿಂದ ಚುಚ್ಚುತ್ತಾರೆ, ಜಗಳವಾಡುತ್ತಾರೆ, ಶಾಪ ಹಾಕುತ್ತಾರೆ, ದ್ವೇಷ ಸಾಧಿಸುತ್ತಾರೆ. ಒಬ್ಬೊಬ್ಬರ ಹೃದಯವೂ ಒಂದೊಂದು ಅಗ್ನಿಪರ್ವತ. ಉದ್ರಿಕ್ತ ಕ್ಷಣದಲ್ಲಿ ವಿವೇಕ ಕಳೆದುಕೊಂಡು ಒಂದೇ ಕುಟುಂಬದಲ್ಲಿದ್ದೂ ಪರಸ್ಪರರ ಎದೆಯಲ್ಲಿ ಗಾಯಮಾಡಿ ಹಿಂಸಿಸುತ್ತಾರೆ. ಇಡೀ ಮನೆಯಲ್ಲಿ ಎಂಥ ಹಿಂಸ್ರ ವಾತಾವರಣವುಂಟಾಗುತ್ತದೆಂದರೆ ಒಬ್ಬೊಬ್ಬರೂ ತಮ್ಮತಮ್ಮ ಗಾಯದ ಮೇಲೆ ಕೈಯಿಟ್ಟುಕೊಂಡು ಇನ್ನೊಬ್ಬರು ಬಂದರೆ ಸಾಕು ಅವರಿಗೆ ತಾವೇ ಮೊದಲು ಚೂರಿ ಹಾಕಿ ತಮ್ಮನ್ನು ರಕ್ಷಿಸಿಕೊಳ್ಳಲು ಹೊಂಚುತ್ತಾರೆ. ಆದ್ದರಿಂದಲೇ ಇದು

ಕಾಡುಕುದುರೆ. ಕಾಡುಕುದುರೆಯ ಸಾಂಕೇತಿಕತೆ ಇಡೀ ವಾತಾವರಣವನ್ನು ಉದ್ರೇಕಿಸುವುದರ ಜೊತೆಗೆ ಪ್ರತಿಯೊಬ್ಬರನ್ನೂ ಆವರಿಸಿ ವಿಜೃಂಭಿಸುತ್ತದೆ. ಸಿಕ್ಕದ ಹೆಣ್ಣಿಗಾಗಿ ಹಲುಬುತ್ತಾ ವ್ಯವಸ್ಥೆಯ ವಿರುದ್ಧ ಸಿಡಿದೆದ್ದು ಹುಲಿಗೊಂಡ ಕಾಡುಕುದುರೆಯಾಗುತ್ತಾನೆ. ತನ್ನ ಪಾಲಿನ ಗಂಡು ಅನ್ಯಾಯವಾಗಿ ಅಕ್ಕನ ಗಂಡನಾದುದನ್ನು ನೋಡಿ ಸಹಿಸಲಾರದೆ ಸಹಿಸುತ್ತ, ವ್ಯವಸ್ಥೆಯ ನೈತಿಕತೆಯನ್ನು ಮೀರುವ ಚಂಪಿ ಕಾಡುಕುದುರೆಯಾಗುತ್ತಾಳೆ. ದಕ್ಕದ ಗಂಡನಿಗಾಗಿ ಪಾರೋತಿ, ಮದುವೆಯ ಭಾಗ್ಯವಿಲ್ಲದೆ ಸಿಕ್ಕ ಅವಕಾಶದಲ್ಲೇ ಸುಖವನ್ನು ದೋಚಬೇಕೆಂದ ಶೀಲಕ್ಕ, ಬಂದೂಕಿನ ಬಲವಿದ್ದೂ ತನ್ನ ನೆರಳಿನಲ್ಲೇ ತಾನು ಕಷ್ಟಪಟ್ಟು ಕಟ್ಟಿದ ವ್ಯವಸ್ಥೆ ಕುಸಿಯುತ್ತಿರುವುದನ್ನು ಕಂಡ ಗೌಡ್ತಿ, ನೈತಿಕತೆಯ ಹಂಗಿಲ್ಲದ ಕೊಮಾಲಿ —ಇವರೆಲ್ಲರೂ ಕಾಡುಕುದುರೆಗಳಾಗುತ್ತಾರೆ.

'ಕಾಡು ಕುದುರೆ'ಯಲ್ಲಿ ಪಾಪದ ಜ್ವಾಲೆ ಒಂದು ಸಂಸಾರವನ್ನು ಹಸಿಹಸಿಯಾಗಿಯೇ ದಹಿಸುವ ರೀತಿ ಮಾತ್ರ ಭೀತಿ-ಕರುಣೆಗಳನ್ನು ಒಟ್ಟಿಗೇ ಉಂಟು ಮಾಡುವಂಥದ್ದು. ಸ್ವಚ್ಛಂದ ಬದುಕಿನ ಕನಸುಗಾರರಾದ ಹುಲಿಗೊಂಡ, ಚಂಪಿ, ಕೊಮಾಲಿಯರ ಬಯಕೆ ಕಾಮಪ್ರೇರಿತವಾದುದಾದರೂ ಕಾಮದ ಹಿನ್ನೆಲೆಯಲ್ಲೇ ಅವರೆಲ್ಲರ ಕನಸುಗಳಿಗೆ, ಮಾತುಗಳಿಗೆ, ಚಟುವಟಿಕೆಗಳಿಗೆ ಅರ್ಥವಿದೆ. ಅವರಿಗೆ ತಾವು ಮಾಡುವುದೆಲ್ಲ ಸರಿ, ಬೇರೆಯವರು ಮಾಡುವುದೆಲ್ಲ ತಪ್ಪಾಗಿ ತೋರುತ್ತದೆ. ತಮ್ಮ ಮಾತುಗಳಿಗೆ ಅಡ್ಡಿಯಾದವರನ್ನು, ತಮ್ಮ ಚಟುವಟಿಕೆಗಳಿಗೆ ತಡೆಯೊಡ್ಡಿದವರನ್ನು ಸಿಗಿದು ತೋರಣ ಕಟ್ಟುವಷ್ಟು ರೋಷ ಅವರಿಗೆ. ಹೀಗೆ ಸುಂದರ ಕನಸು ಮತ್ತು ಅಸಂಗತ ಬದುಕಿನ ಸಂಕೀರ್ಣ ಸ್ಥಿತಿಯನ್ನು ಅನುಭವಪೂರ್ಣವಾಗಿಸುವಲ್ಲಿ 'ಕಾಡುಕುದುರೆ' ಯಶಸ್ವಿಯಾಗುತ್ತದೆ.

'ಕಾಡುಕುದುರೆ' ಲೋರ್ಕಾನ 'ದಿ ಹೌಸ್ ಆಫ್ ಬರ್ನಾರ್ಡಾ ಆಲ್ಬಾ'ದಿಂದ ಪ್ರೇರಿತವಾಗಿದ್ದರೂ ಅದು ಯಾವುದೇ ದೃಷ್ಟಿಯಿಂದಲೂ ಮೂಲಕ್ಕೆ ಋಣಿಯಾಗುವ ಅಪಾಯದಿಂದ ಹೊರತಾಗಿದೆ. ಈಗಾಗಲೇ ಚಲನಚಿತ್ರವಾಗಿಯೂ ಕಾಣಿಸಿಕೊಂಡಿರುವ 'ಕಾಡುಕುದುರೆ' ಸದಭಿರುಚಿಯ ಚಿತ್ರವೆನ್ನುವ ಖ್ಯಾತಿಗೆ ಪಾತ್ರವಾಗಿದೆ. ಆದರೆ ಕಂಬಾರರು ಚಿತ್ರಕ್ಕಿಂತ ಹೆಚ್ಚಾಗಿ ನಾಟಕದ ಬಗೆಗೆ ಅಪಾರ ಭರವಸೆ ಮತ್ತು ವಿಶ್ವಾಸಗಳನ್ನಿರಿಸಿಕೊಂಡಿದ್ದಾರೆ. ಜಾನಪದ ಸೊಗಡು, ಹಳ್ಳಿಯ ಉಲ್ಲಾಸಕರ ಪ್ರೇಮ, ವಿರಸ, ನೋವು, ಸಿಟ್ಟು, ಸಂತೋಷ ಎಲ್ಲವೂ ಇಲ್ಲಿ ಅಚ್ಚುಕಟ್ಟಾಗಿ ಸೇರ್ಪಡೆಯಾಗಿದೆ. ಕಂಬಾರರ ಎಲ್ಲ ನಾಟಕಗಳಲ್ಲೂ ಕಾಣುವ ಜನಪದ ಜೀವನದ ಸಹಜ ಚಿತ್ರಣ, ಖುಷಿ ಕೊಡುತ್ತಲೇ ಮರ್ಮಕ್ಕೆ ತಿವಿಯುವ ಚುರುಕು ಸಂಭಾಷಣೆ, ಲಯ ಹಿಡಿದರೆ ಮೆಲಕು ಹಾಕಬಹುದಾದ ಹಾಡು ಇವೆ. ಇವೆಲ್ಲಕ್ಕೂ ಮಿಗಿಲಾಗಿ ವಸ್ತುವಿನ ಕೇಂದ್ರ ತನ್ನಲ್ಲಿ ಎಲ್ಲರನ್ನೂ ಲೀನವಾಗಿಸಿಕೊಳ್ಳುವಂಥ

ತಾದಾತ್ಮ್ಯದ ಅನುಭವವನ್ನು ಕೊಡುತ್ತದೆ. ಈ ಎಲ್ಲ ವಿಚಾರಗಳ ನೆರವಿನಿಂದ 'ಕಾಡುಕುದುರೆ'ಯನ್ನು 'ತುಘಲಕ್' ನಂತರದ ಉತ್ತಮ ನಾಟಕವೆಂದು ಭಾವಿಸಬಹುದಾಗಿದೆ. ವಸ್ತು ಮತ್ತು ನಾಟಕದ ಚಲನೆಗೆ ಅನುಗುಣವಾಗಿ 'ಕಾಡುಕುದುರೆ'ಯ ರಂಗವಿನ್ಯಾಸ ಕೂಡ ಹೊಸ ಬಗೆಯದಾಗಿದೆ. ಮನೆಯ ಒಟ್ಟು ಏಳು ಭಾಗಗಳಲ್ಲಿ ಕ್ರಿಯೆ ನಡೆದು, ಯಾವುದಾದರೊಂದು ಭಾಗದಲ್ಲಿನ ಕ್ರಿಯೆ ಉಳಿದೆಲ್ಲ ಕಡೆಗೆ ಪ್ರತಿಕ್ರಿಯೆ ಹುಟ್ಟಿಸುತ್ತದೆ. ಇದು ಕಂಬಾರರ ಪ್ರಯೋಗಶೀಲತೆಗೆ, ತಾಂತ್ರಿಕ ಎಚ್ಚರಕ್ಕೆ, ಹೊಸದಾದ ಆದರೆ ಅರ್ಥಪೂರ್ಣವಾದುದರ ಹುಡುಕಾಟಕ್ಕೆ ಸಾಕ್ಷಿಯಾಗಿದೆ. ಒಟ್ಟಿನಲ್ಲಿ ಮಹತ್ವಾಕಾಂಕ್ಷೆಯಿಂದ ಕನ್ನಡದಲ್ಲಿ ನಾಟಕ ಬರೆಯುತ್ತಿರುವವರಲ್ಲಿ ಪ್ರಮುಖರಾದ ಚಂದ್ರಶೇಖರ ಕಂಬಾರರ 'ಕಾಡುಕುದುರೆ' ನಮ್ಮ ಆಧುನಿಕ ರಂಗಭೂಮಿಗೆ ಒಳ್ಳೆಯ ಕಾಣಿಕೆಯಾಗುತ್ತದೆಂಬುದರಲ್ಲಿ ಯಾವ ಅನುಮಾನವೂ ಇಲ್ಲ.

ಬೆಂಗಳೂರು
5-4-1981

—ಬೈರಮಂಗಲ ರಾಮೇಗೌಡ

# ವಂದನೆಗಳು

ಈ ನಾಟಕವನ್ನು ಬರೆದು ಬಹುದಿನಗಳಾದವು. ಈ ಮಧ್ಯೆ ಇದನ್ನು ಚಿತ್ರೀಕರಿಸಿದ್ದೂ ಆಯಿತು. ಚಿತ್ರವಾದ ಮೇಲೆ ಮತ್ತೆ ಕೆಲವು ಬದಲಾವಣೆಗಳನ್ನು ಮಾಡಿ ಇದೀಗ ಹೊರತರುತ್ತಿದ್ದೇನೆ. ಇದಕ್ಕೆ ಮೂಲಪ್ರೇರಣೆ ಲೋರ್ಕಾ ಅವರ 'ದಿ ಹೌಸ್ ಆಫ್ ಬರ್ನಾರ್ಡಾ ಆಲ್ಬಾ' ಎಂಬ ನಾಟಕ. ಆದರೆ ಅದೇ ಬೇರೆ, ಇದೇ ಬೇರೆ, ದರ್ಶನದಲ್ಲೂ ಮತ್ತು ನಿರೂಪಣೆಯಲ್ಲೂ. ಲೋರ್ಕಾ ಅವರಿಗೆ ನನ್ನ ಪ್ರಥಮ ವಂದನೆಗಳು ಸಲ್ಲಬೇಕು.

ಚಿತ್ರನೋಡಿ ಅದರ ಕೊರತೆಗಳನ್ನು ತಿಳಿಸಿ ನಾಟಕ ಈಗಿನ ಸ್ಥಿತಿಗೆ ಬರುವಂತೆ ಮಾಡಿದ ವೈ.ಎನ್.ಕೆ. ಅವರಿಗೆ, ಚಿತ್ರೀಕರಿಸಿದ ವ್ಹೀಲ್ ಪ್ರೊಡಕ್ಷನ್ಸ್ ನಿರ್ಮಾಪಕ ಸ್ನೇಹಿತರಿಗೆ, ಸುಂದರ ಮುಖಪುಟ ಬರೆದುಕೊಟ್ಟ ಆತ್ಮೀಯರಾದ ಚಂದ್ರಕಾಂತ ಕುಸನೂರ ಅವರಿಗೆ, 'ಈ ನಾಟಕದ ಬಗೆಗೆ' ಬರೆದ ಬೈರಮಂಗಲ ರಾಮೇಗೌಡರಿಗೆ, ಪ್ರಕಾಶಪಡಿಸುತ್ತಿರುವ ಸುಬ್ಬಣ್ಣನವರಿಗೆ, ಮುದ್ರಿಸಿದ ಬಾ. ಕಿ. ನ. ಅವರಿಗೆ ವಂದನೆಗಳು.

ಬೆಂಗಳೂರು — ಚಂದ್ರಶೇಖರ ಕಂಬಾರ

ಎಪ್ರಿಲ್ 1981

# ಅ ರ್ಪ ಣೆ

ಕೀರ್ತಿನಾಥ ಕುರ್ತಕೋಟಿ

ಅವರಿಗೆ

# ಪಾತ್ರಗಳು

ಕೊಮಾಲಿ

ದುರ್ಗಿ

ಚಂಡಿ

ಗೌಡ್ರು

ಪಾರೋತಿ

ಶೀಲಕ್ಕ

ಹುಲಿಗೊಂಡ

ರಾಯಪ್ಪ

ಆಳು

ಹಳಬ

ಗಂಡಸರು

ಹೆಂಗಸರು

# ಕಾಡು ಕುದುರೆ

**ರಂಗಭೂಮಿ :**

ಉತ್ತರ ಕರ್ನಾಟಕದ ಹಳ್ಳಿಯ ಗೌಡರ ಮನೆ. ರಂಗದ ತೀರ ಮುಂಭಾಗದಲ್ಲಿ, ಪ್ರೇಕ್ಷಕರ ಬಲಗಡೆ ಒಂದು ರೂಮು. ಅದರಲ್ಲೊಂದು ಮಂಚ. ನೇತುಹಾಕಿದ ಸೀರೆಗಳು, ಗೋಡೆಗೊಂದು ಕನ್ನಡಿ ಇದೆ. ಎಡಬದಿಗೊಂದು ಕಿಡಿಕಿಯಿದ್ದು ಹೊರಗಿನ ಬೆಳಕು ಆ ಮೂಲಕವೇ ಬರಬೇಕು. ಇದೇ ಚಂಪಿಯ ಕೋಣೆ. ಪ್ರೇಕ್ಷಕರ ಎಡಭಾಗದಲ್ಲಿ ಪಾರೋತಿಯ ಕೋಣೆ ತುಸು ಹಿಂಭಾಗಕ್ಕಿದೆ. ಬಾಗಿಲು ಚಂಪಿಯ ರೂಮಿನ ಕಡೆಗಿದೆ. ಕಿಡಿಕಿಯನ್ನು ಮುಚ್ಚಿರುವುದರಿಂದ ಬೆಳಕು ಅಷ್ಟಾಗಿ ಬರುವುದಿಲ್ಲ. ಈ ಕೋಣೆಯ ಈಚೆಯಿಂದ ಎಡಕ್ಕೆ ಹೋದರೆ, ರಂಗ ಮುಗಿಯುವಲ್ಲಿ ತೊಲೆ ಬಾಗಿಲಿದೆ. ಹೊರಗಿನವರು ಬರುವುದೂ, ಬಂದವರು ಹೊರಕ್ಕೆ ಹೋಗುವುದೂ ಇಲ್ಲಿಂದಲೇ. ಈ ಎರಡೂ ರೂಮುಗಳ ಮಧ್ಯೆ ಪಡಸಾಲೆಯಿದೆ. ಅಲ್ಲಿಯೇ ಗೌಡ್ತಿಯ ಮಂಚವಿದೆ. ಅದರ ಹಿಂಭಾಗದ ಗೋಡೆಯ ಮೇಲೆ ಒಂದು ಬಂದೂಕು ತೂಗುಹಾಕಲಾಗಿದೆ. ಪಡಸಾಲೆಯ ಬೆನ್ನಿಗೆ ಅಡಿಗೆಮನೆಯ ಬಾಗಿಲಿದೆ. ಪಡಸಾಲೆಯ ಬಲಬದಿಗೆ, ಪಾರೋತಿಯ ಕೋಣೆಯ ಹಿಂದೆ ಮೆಟ್ಟಲಿದ್ದು ಮೇಲ್ಗಡೆ ಒಂದು ಕೋಣೆಯಿದೆ. ಕೋಣೆಯ ಮುಂದೊಂದು ಕಾರಿಡಾರ್ ಇದ್ದು ಅಲ್ಲಿ ನಿಂತರೆ ಹೊರಗಿನ ರಸ್ತೆಯಲ್ಲಿಯ ವಿದ್ಯಮಾನಗಳು ಕಾಣಿಸುತ್ತವೆ. ಬಾಗಿಲು ಪ್ರೇಕ್ಷಕರ ಬಲದಿಕ್ಕಿಗಿರುವುದರಿಂದ ಅದು ಕಾಣಿಸುವುದಿಲ್ಲ. ಇದು ಶೀಲಕ್ಕನ ಕೋಣೆ.

ರಂಗವಿನ್ಯಾಸವನ್ನು ಕೊನೆಯಲ್ಲಿ ಕೊಡಲಾಗಿದೆ.

# ಆ ಕುದರೀ ಬೆರಗಾ

(ದುರ್ಗಿ ಮತ್ತು ಕೊಮಾಲಿ ಕಾರಿಡಾರ್‌ನಲ್ಲಿ ನಿಂತು ಹೊರಗಡೆ ನೋಡುತ್ತಿದ್ದಾರೆ. ಆಗಾಗ ರಭಸದಿಂದ ಓಡಾಡುವ ಕುದುರೆಯ ಸಪ್ಪಳ. ಹುಡುಗನೊಬ್ಬ ಅದನ್ನು ಪಳಗಿಸುತ್ತಿರುವ ದನಿ. ಕುದುರೆ ಆಗಾಗ ಗುದಮುರಿಗೆ ಹಾಕುತ್ತಿದೆ. ಇಬ್ಬರ ಮುಖದಲ್ಲಿ ಆತಂಕ, ಭಯ. ಕುದುರೆ ಹೇಷಾರವಗೈದು ಚಂಗನೇ ಎತ್ತರಕ್ಕೆ ನೆಗೆದ ಸಪ್ಪಳ. ಇಬ್ಬರೂ ಹೆಂಗಸರು, ಅದು ತಮ್ಮ ಮೇಲೇ ನೆಗೆದಂತೆ 'ಅಯ್ ಅಯ್ ಶಿವನ್ಽ !' ಎನ್ನುತ್ತ ಕೆಳಕ್ಕೆ ಕೂರುತ್ತಾರೆ. ಕುದುರೆ ದೂರಕ್ಕೆ ಓಡುತ್ತದೆ. ಇಬ್ಬರೂ ಪರಸ್ಪರ ಮುಖ ನೋಡಿಕೊಂಡು, ಮೆಲ್ಲನೆ ಇಳಿದು ಪಡಸಾಲೆಗೆ ಏರುತ್ತಾರೆ. ಕೊಮಾಲಿ ಕಾಲು ಹಸಮಾಡತೊಡಗುತ್ತಾಳೆ.)

**ಕೊಮಾಲಿ** — ಏನಂಬೊ ಕುದರಿ ! ಕೆಂಪಗ ಗುಲಗಂಜೀ ಕಣ್ಣ ! ನೋಡಿದರ ಕಾದ ಅಲಗ ಎದ್ಯಾಗ ನಟ್ಟಾಂಗ ಆಗತೈತಿ ! ನನ್ನ ತೊಡೀ ನಡಕ ಇನ್ನಽ ಹೋಗಿಲ್ಲ !

**ದುರ್ಗಿ** — ನಿನ್ನೆ ರಾತ್ರ್ಯಾಗಿಂದ ನೀರ ಮೇವ ಮುಟ್ಟೀ ಇಲ್ಲ, ಹಾಂಗಽ ಒದ್ದಾಡಕ ಹತ್ತಿತ್ತು. ತೊಡೀಮ್ಯಾಲ ಕೈಯಾಡಸಾಕ ಹೋದರ, ಹಿಂಗಾಲೆತ್ತಿ ಎದಿಗೇ ಒದೀತಂತ ಹುಲಿಗೊಂಡಗ !

**ಕೊಮಾಲಿ** — ಏನ್ಽ ಹೇಳ ದುರಗವ್ವಾ, ಅವನ ಕುದರೀಹಾಂಗ ಆದಿಲ್ಲಾ, ಅದರ ಸವಾರನ್ಹಾಂಗ ಅವ ಇಲ್ಲ.

**ದುರ್ಗಿ** — ಕಾಡಕುದರೀ ಗೆಣತಾನಂದರ ಹಾಂಗನ್ಽ ತಂಗಿ. ಅದೇನೋ ಅಂತಾರಲ್ಲಾ, ದಂಟ ಆಡಿದ ಹೆಣ್ಣ ಚಂದ, ಹತ್ತಿ ಓಡಿಸಿದ ಕುದರಿ ಚಂದ,—ಅಂತ. ಇದಂತೂ ಒಂದ್ಽ ದಿನ ಹತ್ತ್ಯೋದ ಬಿಡಲಿ, ಮರದಿನ ಹುಲಿಗೊಂಡನ್ನ್ಽ ಮರೀತೈತಿ. ಮರೀತೈತೆಲ್ಲಾ ಅಂತ ಹತ್ತಿದರ ಅವನ ಜೋಡಿ ಕುಸ್ತೀ ಹಿಡಧಾಂಗ ಮಾಡತೈತಿ.

**ಕೊಮಾಲಿ** — ಏನ ಕುದುರೇ ನಮ್ಮವ್ವಾ ! ಹುಲಿಗೊಂಡ ಬಕ್ಕಬರಲೆ ಅದರ ಬೆನ್ನಿಗಿ ಅತಕೊಂಡ, ಜುಟ್ಟ ಹಿಡದ ಜಗ್ಗಿದರ, ಮುಂಗಾಲ [illegible]

| | |
|---|---|
| | ಅವಮಾತ ಎತ್ತಿ ಹೈ ಅಂತ ನೆಗೀತು, ನೆಗೀತು,—ಅವಯ್ಯಾ ಅನ್ನೂದರಾಗs ಕೆಳಗ ನೆಲಕ್ಕ, ಮ್ಯಾಲ ಆಕಾಸಕ ಏಕದಂ ಏಕಾಏಕ! ನನಗ ನೋಡ್ಸs ತಾಯೀ, ಎಂಥಾ ಅಂಜುಬುರುಕಿ ಅಂತ ಅನ್ನವ್ರೊಲ್ಯಾಕ, ಮೈತುಂಬ ಗವ್ಮಂತ ಬೆವರ ಬಂತ! |
| ದುರ್ಗಿ | (ನಗುತ್ತ) ಕುದರಿಗಿ ಇಷ್ಟ ಅಂಜುವಾಕಿ, ಕುಸ್ತಿ ಹುಡಗೋರ್ನ ಹೆಂಗ ಸಂಬಾಳಸ್ತೀಯೆ? |
| ಕೊಮಾಲಿ | (ನಾಚುತ್ತ) ಬಿಡ್ಸ ದುರಗವ್ವಾ, ಏನ ಚಾಷ್ಟೀ ಮಾಡ್ತಿ. |
| ದುರ್ಗಿ | ಗಂಡನ್ನ ಬಿಟ್ಟೆಂತ, ಹೌಂದ? |
| ಕೊಮಾಲಿ | ಹೌಂದು. |
| ದುರ್ಗಿ | ಪಾಪ, ಆಕಳಂಥಾ ಗಂಡ. |
| ಕೊಮಾಲಿ | ನನಗ ಆಕಳ ಬ್ಯಾಡವ್ವೊ,—ಹೋರಿ ಬೇಕು ಹೋರಿ! |
| | (ಇಬ್ಬರೂ ನಗುವರು) |
| ದುರ್ಗಿ | ಯಾಕ? ಹೋರೀನ ಕಂಡರ ಅಂಜಿಕಿ ಬರಾಣಿಲ್ಲಾ? |
| ಕೊಮಾಲಿ | ಒಂದ ಸರ್ತೆ ಹಿಡದ ಹೊಡಿದರ ಸಾಕು, ತಾನs ಹಾದಿಗಿ ಬಂದ ಹೇಳಿಧಾಂಗ ಕೇಳತೈತಿ! ಕಾಡಕುದರಿ ಹಾಂಗಲ್ಲ ನೋಡು, ದಿನಾ ಪಳಗಿಸಬೇಕು. |
| | (ನಗುತ್ತ ಕಣ್ಣು ಹೊಡೆಯುವಳು) |
| ದುರ್ಗಿ | ಹಾಳಹರಟಿ, ಕೈಯಾಗ ಪರಟಿ, ತಗೊ ತಗೊ. ಗೌಡ್ತಿ ಬರೋ ಯಾಳೆ ಆಯ್ತು. ತಿರಗಾ ಮುರಗಾ ಸೊಲಿಗಿ ಕಾಳ ಅದಾವ ಹಸಮಾಡಾಕ ನಾಕ ನಾಕ ತಾಸ ಬೇಕೇನ್ರೇ—ಅಂತ ಉಗುಳಿ ಉಪ್ಪಹಾಕಿ ಹುರದಾಳು. |
| ಕೊಮಾಲಿ | ಅನ್ನಾಕ ಇನ್ನೆಷ್ಟ ಕಾಳ ಅದಾವ ತಗೊ, ತಗೊ. ಅಲ್ಲ ದುರಗವ್ವ, ನನಗ ಈ ಹುದಲs ತಿಳೀವ್ರೊಲ್ದು — |
| ದುರ್ಗಿ | ಮತ್ತೇನವಾ ತಿಳೀವ್ರೊಲ್ದು? |
| ಕೊಮಾಲಿ | ಹುಲಿಗೊಂಡ ಹೊರಗs, ಕುದರೀ ಬೆನ್ನಮ್ಯಾಲs ಅದಾರು, ಒಳಗ ಚಂಪಕ್ಕನ ಮದಿವೀ ಗಟ್ಟಿ ಮಾಡಿದರಂದರ.... |
| ದುರ್ಗಿ | ಅವನ್ನ ಬಿಟ್ಟs ಗಟ್ಟಿ ಮಾಡಿದರು, |

ಕೊಮಾಲಿ : ಮನೀ ಅಳಿಯಾನ್ನ ಬಿಟ್ಟ ?

ದುರ್ಗಿ : ಎಷ್ಟಂತ ಹಾದಿ ನೋಡ್ಯಾರು ? ಹರೀವತ್ತ ಕುದರೀ ಹತ್ತಿದಾವ, ಮದ್ಯಾನ್ನಾದರೂ ಹಾದಿಗಿ ಬರವೊಲ್ದು. ಕುದರೀ ತಲೀ ಕೆಟ್ಟಿತಂದರ ಹಿಂಗs : ಹತ್ತಿದಾವ ಜೀವಂತ ಕೆಳಗ ಇಳದಾನಂತ ಹೇಳಾಕs ಆಗಾಣೆಲ್ಲ.

ಕೊಮಾಲಿ : ಬೀಗರ ಬಂದಾಗs ಹಿಂಗ ಆಗಬೇಕ ?

ದುರ್ಗಿ : ಗೌಡ್ರಿ ಇಂಥಾದ್ದಕ್ಕೆಲ್ಲಾ ಸೊಪ್ಪ ಹಾಕಿದಾಕೀ ಅಲ್ಲ.

ಕೊಮಾಲಿ : ಗೌಡ್ರಿ ಬ್ಯಾಡವಾ, ಬಂದ ಬೀಗರೇನಂದಾರು ? ಮನ್ಯಾಗ ಸಣ್ಣಮಗಳ ಬಷ್ಟಗಿ ಕಾರ್ಯೇ ನಡದೈತಿ,—ಮನಿ ಅಳಿಯಾ, ಊರಿಗಿ ಹಿರಿಯಾ, ಹುಲಿಗೊಂಡ ಗೌಡರs ಇಲ್ಲಂದರ ? ಏನಾರ ಜಗಳಾಗೇತೇನ ?

ದುರ್ಗಿ : ಜಗಳಿಲ್ಲ, ಗಿಗಳಿಲ್ಲ. ಅವನ ಸೊಭಾವನ ಹಾಂಗ.

ಕೊಮಾಲಿ : ತಗಿ ತಗಿ, ಬೆಂಕಿಲ್ಲದs ಹೊಗಿ ಹೆಂಗ ಕಂಡೀತು ?

ದುರ್ಗಿ : ಅದೇನ ಹೊಗಿ ಕಂಡೀಯೋ ನಿನಗs ಗೊತ್ತವಾ ! ನನ್ನ ಕಣ್ಣ ಮುಂದ ಆಗ್ಯಾವ ; ಹೊಗಿ ಕಾಣಸೂದs ಇಲ್ಲ. ಕಾಡಕುದರೀ ತಲೀ ಯಾವಾಗ ಕೆಡತೈತೀ ಅಂತ ಹೆಂಗ ಹೇಳೂದಾ ?

ಕೊಮಾಲಿ : ಸುಮ್ಮನs ಜಾರಿಕೊಬ್ಯಾಡ. ಕುದರೀ ತಲೀ ಕೆಟ್ಟರ ಕೊಟ್ಟಿಗ್ಯಾಗ ಕಟ್ಟಿ ಹಾಕಬೇಕವಾ. ಬೀಗರ ಬಂದಾಗs ಪಳಗಿಸಬೇಕ?

ದುರ್ಗಿ : ಕಾಳ ಹಸಮಾಡಾಕ ಬಂದೀದಿ, ಹಸಮಾಡಿ ಹೋಗs. ಊರ ಮಂದೆಲ್ಲಾ ತನ್ನ ಮಸಿತಾನಾನs ಆಡಿಕೊಳ್ತಾರಂತ ಗೌಡ್ರಿಗಿ ಮೊದಲs ಸಂಶೆ ಐತಿ. ಅವಕ್ಕ ಬಷ್ಟಗಿ ಕಾರ್ಯೇಕ ಯಾರ್ನೂ ಕರೀಲಿಲ್ಲ, ನೋಡಿದಿಲ್ಲ ? ಈ ಊರ ಮಂದೀನೂ ಹಾಂಗs ; ಕಂಡದ್ದೂ ಆಡತಾರ, ಕಾಣದ್ದೂ ಆಡತಾರ !

ಕೊಮಾಲಿ : ಕಂಡಿರತಾರ, ಆಡತಾರ.

ದುರ್ಗಿ : ಏನ ಕಂಡಿರತಾರಗs ?

ಕೊಮಾಲಿ : ಹೋದವರ್ಷ ಹಿರೀಮಗಳು ಪಾರೋತೀ ಮದಿವಿ ಆತು, ಬಂಗಾರದಂಥಾ ಅಳಿಯಾ ಸಿಕ್ಕ, ಬರೋಬರಿ. ಈ ವರ್ಷ ಎರಡನೇದಾಕಿ ಶೀಲಕ್ಕನ ಮದಿವೀ ಬಿಟ್ಟ, ಕಡೀ ಮಗಳು ಚಂಪಕ್ಕನ ಮದಿವಿಗೇ ಅವಸರ ಮಾಡಿದರ ಮಂದಿ ಯಾಕ ಆಡಿಕೊಳ್ಳಾಣೆಲ್ಲಾ ? ಹೇಳಲ್ಲ,—

ದುರ್ಗಿ : ಹಿರೀಮಗಳ ಹೆಸರಿಗೆ ಆಸ್ತಿ ಇತ್ತು, ಮದಿವ್ಯಾತು. ಕಡೀ ಮಂಗಳು ಚಂಪಕ್ಕ ಚಂದ ಅದಾಳ, ಆಗತೈತಿ. ಶೀಲಕ್ಕಗ ಆಸ್ತೀನೂ ಇಲ್ಲ, ಚೆಲಿವಿಕೀನೂ ಇಲ್ಲ. ಬಾ ಅಂದರ ವರ ಹೆಂಗ ಬಂದಾವು ? ಇದರಾಗ ಅಡಿಕೊಳ್ಳುವಂಥಾದ್ದ ಏನೈತಿ ?

ಕೊಮಾಲಿ ದೊಡ್ಡವರ ಮಕ್ಕಳಿಗಿ ವರಾ ಏನ ಕಮ್ಮಿ ಬಿಡ !

ದುರ್ಗಿ ಶೀಲಕ್ಕನ ನಶೀಬ ಆಕೀ ಹಲ್ಲಿನ್ಹಾಂಗ ಭಾಳ ಖೊಟ್ಟಿ. ಬಂದ ವರಾ ಆಕೀ ಹಲ್ಲ ನೋಡಿ, ಈಕಿ ಬ್ಯಾಡ, ಕಡೀ ಮಗಳ್ನ ಕೊಡತೀರೇನು ?—ಅಂತ ಹಟ ಹಿಡೀತಾರ. ಗೌಡ್ತಿಗೆ ಏನ ಮಾಡಂದಿ ?

ಕೊಮಾಲಿ ಏನೋಪಾ ! ಅಪಸರ ಮಾಡೋದ ನೋಡಿದರ ಹಾದೀಲೆ ಹೋಗವನ್ನ ಕರದು ಚಂಪಕ್ಕನ ಕತ್ತಿಗಿ ಕಟ್ಟೋ ಹಾಂಗ ಕಾಣತೈತಿ.

ದುರ್ಗಿ ನೀ ಆಡೋ ಮಾತ ಗೌಡ್ತಿ ಕೇಳಿದರ—ನಿನ್ನ ಕೆಲಸಾನೂ ಸಾಕು, ನೀ ಆಡಿಕೊಳ್ಳೋದೂ ಸಾಕಂತ ಮನೀಗಿ ಕಳಸ್ತಾಳಷ್ಟ.

ಕೊಮಾಲಿ ಅಪಯ್ಯಾ ! ಆಡಬಾರದ್ದು ನಾ ಏನ ಆಡಿದೆ ?

ದುರ್ಗಿ ದೊಡ್ಡವರ ಸುದ್ದಿ ನಮಗ್ಯಾಕ ತಂಗಿ ?

ಕೊಮಾಲಿ ಅಯ್ ಬಿಡಪ್ಪೋ, ಸಣ್ಣವರು, ನಮ್ಮ ಮುಂದ ಯಾಕ ಹೇಳೀ ನೀನು ?

ದುರ್ಗಿ ಹೇಳಾಕ ನನಗೇನ ಗೊತ್ತೈತಿಗ ? ನಾನೂ ನಿನ್ಹಾಂಗs ಒಂದ ಆಳು.

ಕೊಮಾಲಿ ನೀ ಒಳ್ಳೆ ಜಾರಿಕೊಳ್ಳುವಾಕಿ ಬಿಡ. ಸಣ್ಣಂದಿರತ ಇದ್s ಮನ್ಯಾಗ ಬೆಳದ ಮುದಿಕಿ ಆದಿ ; ನಿನಗ ತಿಳೀದs ಇರತೈತಿ ? ಹೇಳಾಕ ಒಲ್ಲೆಂದರ ಆಗಾಂಲ್ಲ ಅನ್ನು.

ದುರ್ಗಿ ನಾ ಒಲ್ಲೆಂದರೂ ಒಂದs, ಆಗಲೆಂದರೂ ಒಂದs ; ಆಗೋದನ್ನ ಯಾರಾದರೂ ತಪ್ಪಸಾಕ ಆಗತೈತಿ ? ಅವರವರ ಹಣ್ಯಾಗ ಬರದದ್ದ ಆಗತೈತಿ.

ಕೊಮಾಲಿ ಅದs ಅಂತೀನ್ನಾನೂ ! ಹುಲಿಗೊಂಡ ಮನೀ ಅಳಿಯಾ ಆಗ್ಯಾರ, ಗೌಡರಾಗಿ ಊರಗಾರಿಕಿ ಮಾಡತಾರ,—ಹಾಸೀಲೆ ನಗಾಕ ಬಾಯಿ ತೆರದವರು ಸಾಯೋತನಕ ಮುಚ್ಚಬಾರದು.

ನಕ್ಕಾರೇನು ಅಂತ ಪಾರೋತೆವ್ವನ ಮದಿವ್ಯಾದಾಗಿಂದ ನೋಡ ತೇನು, ಅವರೇನೂ ಚಪ್ಪಾಳಿ ಹೊಡದ ಖೊಕ್ಕಂತ ನಗಲಿಲ್ಲ; ಒಬ್ಬರ ಜೋಡೀ ವೋಜಿನಿಂದ ಮಾತಾಡಲಿಲ್ಲ.

(ಅಷ್ಟರಲ್ಲಿ ಚಂಪಿ ವಿಷಣ್ಣವದನಳಾಗಿ ತನ್ನ ರೂಮಿನಿಂದ ಹೊರಗೆ ಬಂದು ಮಂಚದ ಮೇಲೆ ಕೂರುವಳು. ಅವಳನ್ನು ನೋಡಿ ಕೊಮಾಲಿ ಉತ್ಸಾಹದಿಂದ ಕೈ ಒರಸಿಕೊಂಡು ಚಂಪಿಯ ಬಳಿಗೆ ಹೋಗುತ್ತ)

ಅಯ್ ಚಂಪಕ್ಕಾ! ಮದಿವಿ ಗಟ್ಟಿ ಆಯ್ತಂತ!

(ಎಂದು ಆಸೆಬುರುಕತನದಿಂದ ಚಂಪಿಯುಟ್ಟ ಸೀರೆ ಹಿಡಿದು)

ಗಂಡನ ಮನಿ ಸಿರೇನ್ರಿ? ಏನ ಚಂದ ಐತಿದು!

(ಎನ್ನುತ್ತ ಮುಟ್ಟಿ ಮುಟ್ಟಿ ನೋಡುವಳು. ಚಂಪಿ ರೇಗಿ ಚಟ್ಟನೆ ಅವಳ ಕೈಗೆ ಹೊಡೆದು ಕಣ್ಣು ಕಿಸಿಯುವಳು. ಕೊಮಾಲಿಗೆ ಹೊಯ್ಯಾಗುತ್ತದೆ. ಅಷ್ಟರಲ್ಲಿ ಹುಲಿಗೊಂಡ ಮಾರಿಗಿಂದ ಎಂದು ಅಡಿಗೆಮನಿ ಕಡೆ ಹೋಗುತ್ತ ಹೇಳುವನು)

ಹುಲಿಗೊಂಡ ದಂಗೀ, ಊಟಕ್ಕ ಕೊಡಬಾರದೇ.

(ತಕ್ಷಣ ಚಂಪಿ ಎದ್ದು ನೇಡಿಗೆಂಬಂತೆ ಕುಲು ಕುಲು ನಗುತ್ತ ಸೀರೆ ಸೆರಗು ತೂಗಿ ಪಂಸ್ಬ್ಬರ ಮಾಡುತ್ತ)

ಚಂಪಿ ಹೌಂದಪ್ಪ ಕೊಮಾಲಿ, ನನ್ನ ಗಂಡನ ಮನಿಯವರು ತಂದಾರ. ಸಾವಿರ ರೂಪಾಯಿ ಕೊಟ್ಟಾರಂತ. ಏನ ಚಂದ ಐತೆಲ್ಲಾ? ಎಷ್ಟು ಹಗರ ಐತೆಂದಿ? ಉಟ್ಟು ನಡದಾಡಿದರ ಆಕಾಶದಾಗ ಹಾರ್ಯಾಡಿಧಾಂಗ ಅನಸತೈತಿ! ಇದರ ಸೆರಗ ನೋಡs! ಸೆರಗಿನಾಗಿನ ಗಿಣೀ ಹಿಂಡ ನೋಡs!

(ಅಡಿಗೆಮನೆ ಬಾಗಿಲಲ್ಲಿ ಇವಳ ಸಂಭ್ರಮ ನೋಡುತ್ತ ನಿಂತಿದ್ದ ಹುಲಿಗೊಂಡನಿಗೆ ಇದನ್ನು ಸಹಿಸಲಾಗುವುದಿಲ್ಲ. ರಭಸದಿಂದ ತಿರುಗಿ ಹೊರಗೇ ಹೋಗುತ್ತಾನೆ. ಚಂಪಿ ನಿರಾಸೆಯಿಂದ ಮಂಚದ ಮೇಲೆ ಕೂತು, ಮುಖಕ್ಕೆ ಸೆರಗು ಹಾಕಿ ಅಳ ತೊಡಗುವಳು. ಕೊಮಾಲಿಗೆ ಏನೂ ತಿಳಿಯದೆ, ಪೇಚಿನಲ್ಲಿ

ಡ್ತಾಳೆ. ಕೋದಗೊಂಡ ದುರ್ಗಿ ಮೆಲ್ಲನೆ ಚಂಪಿಯತ್ತ ಬರು ತ್ತಾಳೆ. ಚಂಪಿ ಥಟ್ಟನೆ ಎದ್ದು ತನ್ನ ರೂಮಿಗೆ ಹೋಗಿ ಬಾಗಿಲಿಕ್ಕಿಕೊಳ್ಳುತ್ತಾಳೆ. ದುರ್ಗಿ ಹೋಗಿ ಬಾಗಿಲು ಬಡಿಯುತ್ತಾಳೆ.)

ದುರ್ಗಿ : ಚಂಪಕ್ಕಾ, ಚಂಪಕ್ಕಾ, ಬಾಗಿಲು ತಗಿಯವಾ.

(ಕೊಮಾಲಿ ತನ್ನನ್ನೇ ಪ್ರಶ್ನಾರ್ಥಕವಾಗಿ ನೋಡುತ್ತಿದ್ದುದನ್ನು ಗಮನಿಸುತ್ತಾಳೆ. ತಂತಾನೇ ಮಾತಾಡಿಕೊಂಡಂತೆ ಹೇಳುತ್ತಾಳೆ.)

ಏನ ಹೇಳಲೆ ತಂಗಿ! ಈ ಮನ್ಯಾಗ ಇದ್ದವರ ಎದ್ಯಾಗ ಒಂದೊಂದ ಹುಣ್ಣ ಅದಾವ. ಒಂದ ಕೈಲೆ ತಮ್ಮ ಹುಣ್ಣ ಹಿಡಕೊಳ್ತಾರ, ಇನ್ನೊಂದ ಕೈಯಾಗ ಚೂರಿ ಹಿಡಕೊಂಡ ಹಗಲಿ ರಾತ್ರಿ ಕಾಯತಾರ. ಯಾರಾದರೂ ಎದರ ಬಂದರ ಸಾಕು, ತಾವs ಮುಂದಾಗಿ ಅವರ ಹುಣ್ಣಿನಾಗ ಚೂರಿ ಆಡ ಸಾಕ ಹೋಗತಾರ. ಇದು ಮನೀ ಅಲ್ಲs ಮಗಳs, ಇರದಾಡೋ ಕಣ!

(ಹುಲಿಗೊಂಡ ಕುದುರೆ ಕಟೆಯುವ ಸಪ್ಪಳ ಕೇಳಿಸುತ್ತದೆ.)

ಕೊಮಾಲಿ : ಹಾ, ನನಗ ಆಗs ಸಂಶೆ ಬಂತs ಎವ್ವಾ, ಇಕ್ಕs ಈಗ ಚಂಪಕ್ಕನ ಮನಿತನ ಗಟ್ಟಿ ಆಗೇತಿ, ಎಷ್ಟ ಖುಶಿ ಮೋಜಿನಿಂದ ಇರಬೇಕು; ಬೀಗರುಂಡ ಮುಸರಿ ಇನ್ನs ತೊಳದಿಲ್ಲಾ, ಅತ್ತ ಅತ್ತ ಉರದ ಬೆಂಕೀ ಕೆಂಡ ಆಗ್ಯಾಳ! ಬಪ್ಪಗೀ ಕಾರ್ತೀಕ ಬೀಗರ ಬಂದಾರ, ಮನೀ ಅಳಿಯಾ ಕುವರೀ ಹತ್ತಿ ಓಡಿಸ್ಯಾಡಕ ಹತ್ಯಾನ! ಇಕಾ, ನಿನ್ನ ಕಣ್ಣು ತೇವಾದುವು. ನನ್ನ ಮುಂದ ಹೇಳಬಾರದ್ದ ಅದೇನೈತಿ ?

ದುರ್ಗಿ : ಚಂಪಕ್ಕನ್ನ ಕಂಡರ ಜೀವ ಮರಗತೈತಿ. ಏನಂದರೂ ಈ ಮನ್ಯಾಗ ಕರುಳ ಇದ್ದಾಕೀ ಅಂದರ ಆಕಿ ಒಬ್ಬಾಕೀನs. ಆಕಿ ದೊಂದ ಮದಿವಿ ಆದರ ತಣ್ಣಗ ಕಣ್ಣಮುಚ್ಚಬೇಕಂತೀನಿ. ದೇವರು ಯಾವ ದಡಕ್ಕ ಹಚ್ಚತಾನೊ!

ಕೊಮಾಲಿ : ಎಲ್ಲಾ ಚೆಲೋ ಆಗತೈತಿ ತಗೊ.

ದುರ್ಗಿ : ನಿನ್ನ ಮಾತ ಖರೇ ಬರಲೇ ತಾಯಿ, ನಿನ್ನ ಬಾಯಿಗೆ ಬೆಲ್ಲಾ ಇಡತೇನು.

| | |
|---|---|
| ಕೊಮಾಲಿ | ಇಟ್ಟೀಯಂತ, ಇದರ ಹಿಂದಾ ಮುಂದಾ ಅಷ್ಟ ಹೇಳಲ್ಲಾ. ಇನ್ನs ಗೌಡ್ರಿ ಬೀಗರ್ನ ಕಳಿಸಿ ಬರಬೇಕು, ಅಲ್ಲೀತನಕಾ ಹಿಂಗs ಕೂರೋದಾ ? |
| ದುರ್ಗಿ | (ಒಳಗಿನ ದುಗುಡ ಮುಚ್ಚುತ್ತ) ಕುದರೀ ಕತಿ ಹೇಳ್ತೀನ ಕೇಳ. |
| ಕೊಮಾಲಿ | ಚಂಪಕ್ಕನ ಸುದ್ದೀ ಹೇಳಂದರ.... |
| ದುರ್ಗಿ | ಕತಿ ಹೇಳ್ತೀನಿ ಕೇಳಗs. ದೊಡ್ಡ ಕತಿ. ಎಷ್ಟ ದೊಡ್ಡದೈತಂದರ ಆ ಕತಿ ಇನ್ನs ಮುಗಿದ್ದs ಇಲ್ಲ. |
| ಕೊಮಾಲಿ | ಅದೇನ ಹೇಳ್ತೀಯೋ ಹೇಳವಾ. |
| ದುರ್ಗಿ | ಹೆಂಗs ಹೇಳ್ಸಲೆ ತಂಗೀ ನಿನಗಾ<br>ಆ ಕುದರೀ ಬೆರಗಾ ॥ |

ಗಂಡಮೆಟ್ಟ ನಾಡಿನಾಗೊಬ್ಬ ಪುಂಡ ಸರದಾರಿದ್ದಾ, ನೆಲ ಒದ್ದ ನೀರ ತಗೀತಿದ್ದ. ಬೆರಳಿನಾಗ ಬೆಟ್ಟ ಎತ್ತತಿದ್ದಾ. ಒಂದ ದಿನ ಏನೇನೋ ಕನಸ ಕಾಣತಾ ಶಿವಾಪುರಕ್ಕ ಹೊಂಟಿದ್ದಾ. ದಾರ್‍ಯಾಗ ಕಾಡಮಲ್ಲಿಗಿ ಹೂ ಹರಕೊಂಡ ಉಡೀ ತುಂಬಿ ಕೊಂಡಾ. ಕಾಡ ದಾಟಿದ ಮ್ಯಾಲೊಂದ ಕಬ್ಬಿನ ತೋಟ ಇತ್ತು. ತೋಟದಾಗೊಂದ ಮಗೀದುರುಂಬಿನ ಹೆಣ್ಣ ಕುಂತಿತ್ತು. ಆಕೀ ಚೆಲ್ವಿಕಿ ನೋಡಿ ಹುಡುಗ ಕರಗಿ ಹೋದ. ಯಾರ ಮಗಳು, ಏನು, ಎತ್ತಾ, ತಿಳಕೊಂಡಾ. ಮನೀಗಿ ಬಂದು ಕಂಬಳಿ ಹೊತ್ತ ಮಲಗಿದ. ಅವ್ವ ಬಂದು ಎಬ್ಬಿಸಿದಳು, ಏಳಲಿಲ್ಲ. ಅಪ್ಪ ಬಂದ ಎಬ್ಬಿಸಿದ, ಏಳಲಿಲ್ಲ. ಊರ ಹಿರೇರಿಗೂ ಏಳಲಿಲ್ಲ. ಕಡೀಕ ಒಬ್ಬ ಹಿರ್‍ಯಾ ಕೇಳಿದ: ಈ ಹುಡುಗ್ಗ ಮದಿವೀ ಮಾಡೀರೇನು ?

ಹುಡುಗ ಥಟ್ಟನ್ನs ಎದ್ದಕೂತ. "ಹಾ ಅದನ್ನ ಮಾಡ್ಯಾರೇನು, ಕೇಳ್ರಿ, ಮಾಡ್ಯಾರೇನು ಕೇಳ್ರಿ" ಅಂದ. ಹಿರೇರೆಲ್ಲಾ ನಕ್ಕರು. "ಯಾರನ್ನ ಮದಿವ್ಯಾಗ್ತಿ ?" ಅಂದರು.

ಮಗೀದುರುಬಿನ ಅಸ್ವಲ ಹೆಣ್ಣ
ಎದ್ಯಾಗ ಮಾಡ್ಯಾಳ ಮಾಯದ ಹುಣ್ಣ
ತಂದ ಕೊಟ್ಟರ ಬದಕೇನಣ್ಣಾ
ಸಾವಿಗೂ ಇಲ್ಲೊ ನನ್ನ ಮ್ಯಾಲ ಕರುಣಾ ॥

ಅಪ್ಪ ಅಂದಾ :

ಅವರನ್ನೋಡೀಯಾ ? ರಾಜರು. ನಮ್ಮನ್ನೋಡೀಯಾ ? ಬಡರೈತರು. ನಮ್ಮಂಥವರಿಗಿ ಮಗಳ್ನ ಹೆಂಗ ಕೊಟ್ಟಾರು ? ಬ್ಯಾರೇ ಹುಡಿಗೀನ್ನ ತರ್ತೀನಿ.

ಮಗ ಅಪ್ಪನ ಕಾಲ ಹಿಡದಾ. ಮಗನ ತಾಪ ನೋಡಲಾರದ ಅಪ್ಪ : ಸಿಕ್ಕರ ಶಿಕಾರಿ. ಸಿಗದಿದ್ದರ ಭಿಕಾರಿ ; ಬಾ— ಅಂದ,—

ಹೆಂಗ ಹೇಳಲಿ ತಂಗೀ ನಿನಗಾ
ಆ ಕುದರೀ ಬೆರಗಾ ॥

ರಾಜನ ಅರಮನೀ ಮುಂದೊಂದು ಕಾಡಕುದರಿ ಕಟ್ಟಿಹಾಕಿದ್ದರು. ನಾಡಿನಾಗಿನ ಸವಾರರೆಲ್ಲಾ ಅದನ್ನ ಪಳಗಿಸಬೇಕಂತ ಬಂದು, ಮೀಸಿಗಿ ಮಣ್ಣ ಹಚ್ಚಿಕೊಂಡ ಹೋಗಿದ್ದರು. ಹಾಕಿದ ಜೀನ ಸೈತ ಬಿಚ್ಚೋ ಧೈರ್ಯ ಯಾರಿಗೂ ಆಗಿರಲಿಲ್ಲ. ರಾಜ ಅದನ್ನs ನೋಡ್ತಾ ನಿಂತಿದ್ದ. ಅಪ್ಪ, ಮಗ ಬಂದರು.

"ರಾಜರ ರಾಜರs ..."
"ನಮ್ಮಲ್ಲಿ ಕೂಲಿ ಕೆಲಸ ಇಲ್ಲಪಾ"
"ರಾಜರ ರಾಜರs ..."
"ನಮ್ಮಲ್ಲಿ ನೌಕರಿ ಚಾಕರಿ ಇಲ್ಲಪಾ"
"ನೌಕರಿಗಾಗಿ ಬಂದಿಲ್ಲ, ಚಾಕರಿಗಾಗಿ ಬಂದಿಲ್ಲ ನನ್ನ ಮಗನಿಗೆ ನಿಮ್ಮ ಮಗಳ್ನ ಕೇಳಾಕ ಬಂದೀನಿ"

ರಾಜಾ ಹುಬ್ಬೇರಿಸಿ ನೋಡಿದಾ; ಹರಕಬಟ್ಟಿ ತಿರುಕರು, ಚಿಂದೀ ಬಟ್ಟಿ ಗೊಂದಲದವರು, ಕಾಡರೈತರು ನನ್ನ ಮಗಳ್ನ ಕೇಳೋ ಹಾಂಗ ಆಯ್ತಲ್ಲಪಾ ! ಬಾ ಮುಂದಂದ, ಕುದರೀ ತೋರಿಸಿದ—

ಹತ್ತಿ ಪಳಗಿಸೋ ಮಾಡಿ ಸವಾರಿ
ಮಗಳ ಕರೆದೊಯ್ಯೊ ಕುದುರೆಯನೇರಿ !

ಹೆಂಗ ಹೇಳsಲಿ ತಂಗೀ ನಿನಗಾ
ಆ ಕುದರೀ ಬೆರಗಾ ॥

ನೋಡೀಯಾ ? ಕಾಡಕುದರಿ. ಹತ್ತೀಯಾ ? ಜೀವದಾಸೆ ಇಲ್ಲ. ಬಿಟ್ಟೀಯಾ ? ಮಗೀದುರುಂಬಿನ ಹೆಣ್ಣ ಅಟ್ಟದ ಮ್ಯಾಲ ನಿಂತಾಳ !

ಮಿರಿಮಿರಿ ಮಿಂಚಿತು ಕಾಡಿನ ಕುದರಿ
ಕರಿ ಮೈ ಬಣ್ಣದ ಉಕ್ಕಿನ ಕುದರಿ
ಕತ್ತಿನ ಕೇಶ ಹೊತ್ತಿದ ಉರಿ ಉರಿ
ಕಣ್ಣಾಗಿದ್ದವು ಸಣ್ಣಾನ ಚೂರಿ
ಪಳಗಿಸುವಂಥಾ ಘನ ಎದಿವಂತಾ
ಹುಟ್ಟಿರಲಿಲ್ಲದ ಹೈಹೈ ಕುದರಿ

ಹುಡುಗ ನೋಡಿದ. ಹೌಸೀಲೆ ಕಡಿವಾಣ ಕೈಯಾಗ ಹಿಡಕೊಂಡ. ಹತ್ತಾಕ ಕಾಲ್ಕಂಡೀ ಒಳಗ ಕಾಲ ಹಾಕಿದ. ಅಯ್ ಶಿವನ !

ಕುದರಿ ಹ್ಯಾಕರಿಸಿದ್ದs ಚಂಗನs ನೆಗೀತು, ನೆಗೀತು,—ಕಾಲ್ಕಂಡೀ ಒಳಗಿನ ಕಾಲು ಅಲ್ಲೇ ಐತಿ, ಹುಡುಗ ಅಂಗಾತ ಬಿದ್ದಾ. ಬಿದ್ದ ಹುಡಗನ್ನ ದರದರ ಎಳಕೊಂಡ ಬಂದೂಕಿನ ಗುಂಡ ಹಾರಿಧಾಂಗ ಓಡಿತು! ಕಂಡಿದ ಮಂದಿ ಹಾ ಹಾ ಅನನ್ನದರಾಗ ಹೈ ಹೈ ಅಂತ ಕಾಡಿನಾಗ ಓಡಿ ಕಣ್ಮರಿ ಆಯ್ತು !

ಎಲ್ಲಾರು ಹುಡುಗನ ಆಸೇಬಿಟ್ಟರು. ಹೆಣ್ಣ ಕೊಡಾಣೆಲ್ಲಾಂತ ಭಿಡೇ ಬಿಟ್ಟ ಹೇಳಬೇಕಾಗಿತ್ತು. ಕುದರೀ ಪಳಗಸು ಅಂತ ಯಾಕಾದರೂ ಹೇಳಿದ್ನೋ — ಅಂತ ರಾಜ ಮರುಗಿದ. ಅಟ್ಟದ ಮ್ಯಾಲ ಮಗೀದುರುಂಬಿನ ಹುಡಿಗಿ—ಬಂದಾನೋ ಬಾರನೋ ಅಂತ ನಿಂತಿದ್ಲು. ತುರುಬ ಬಿಚ್ಚಿ ಬಿತ್ತು; ಊರ ತುಂಬ ಕತ್ತಲಾಯ್ತು. ಮಂದಿ ಹಾಂಗs ಕುಂತಿದ್ದರು.

ಅಷ್ಟರಾಗ ಕುದರಿ ಕಾಡದಾಟಿ ಉಸಕಿನಾಗ ಓಡುವಾಗ, ಅದರ ಆಟ ನಡೀಲಿಲ್ಲ. ಹುಡುಗ ಸಿಕ್ಕಲೇ ಅಂದವನ ಹತ್ತಿ ಪಳಗಿಸಿದ. ತಿರಿಗಿ ಬಂದ. ಹುಡಿಗೀ ಎದಿ ಗೆದ್ದ ಬಂದ. ಮಗೀದುರುಬಿನ ಹುಡಿಗಿ ಕುಲುಕುಲು ನಕ್ಕಳು, ಊರ ತುಂಬ ಬೆಳದಿಂಗಳು ಬಿತ್ತು. ರಾಜ "ಮಗಳ್ನ ಕೊಟ್ಟೆ"—ಅಂದ,

ಹೆಂಗ ಹೇಳಲಿ ತಂಗಿ ನಿನಗಾ
ಆ ಕುದುರೀ ಬೆರಗಾ ॥

ಮಾದಿವೀ ಮೆರವಣಿಗಿ ಬಂತು. ಬೆರಳಊರೇನಂದರ ಜಾಗಾ ಸಿಗಧಾಂಗ ಮಂದಿ ಸೇರಿತ್ತು. ಹುಡಂಗ ನೋಡತಾನ: ಬ್ಯಾರೇ ಇನ್ನ್ಯಾರೋ ಹುಡಿಗೀ ಜೊತೆ ಮಾದಿವೀ ತಯ್ಯಾರಿ ನಡಸ್ಯಾರ ! ಛೇ—ನನಗ ಮೋಸ ಮಾಡಿದಿರಿ. ನನಗ ಈ ಮದಿವಿ ಬ್ಯಾಡ ಅಂದ. ರಾಜಾ ಅಂದ :—

ನೋಡಪಾ, ನನಗ ಮೂರ ಮಂದಿ ಹೆಣ್ಣ ಮಕ್ಕಳು. ಹಿರೇ ಮಗಳು, ನನ್ನ ಖಾಸಾ ಮಗಳು. ಉಳಿದಿಬ್ಬರು ನನಗ ಹುಟ್ಟಿದವರಲ್ಲ. ಏನ ಮಾಡ್ಲೆಪಾ, ಬಂದೂಕ ಹಿಡಿಯೋ ತಾಕತ್ತಿಲ್ಲ. ಹಿರೇ ಮಗಳಿಗೆ ಮಸ್ತ ಆಸ್ತಿ ಪಾಸ್ತಿ ಐತಿ. ಯಾರಿಗುಂಟು, ಯಾರಿಗಿಲ್ಲ ; ತಗೊ ಕೊಡತೀನಿ, ಕೈಮ್ಯಾಲ ಕೈಹಾಕಿ.

ಅಪ್ಪ ಬಂದ
ಮಗನ್ಯ ನಿನ್ನಿಂದ ನನ್ನ ಬಡತನ ಹೋದೀತು. ಒಪ್ಪಿಕೊಳ್ಳೋ ಅಂದ. ಸೆರಗೊಡ್ಡಿದ, ಕೈಕಾಲ ಹಿಡಿದಾ. ಕಡೀಕ ತಂದೀ ಒತ್ತಾಯಕ್ಕ ಮಗ ಮದಿವ್ಯಾದ.

ರಾಜಾನ ರಾಜ್ಯೆಲ್ಲಾ ಬಂಜರ ಭೂಮಿ. ನೀರ ತಗೀಬೇಕಂತ ನೆಲಾ ಒದ್ದ. ಒದ್ದಲ್ಲಿ ಒಂದೊಂದ ತಗ್ಗ ಬಿದ್ದ್ವು, ಬಿದ್ದ ತಗ್ಗ ಗೋರೀ ಮಾಡಿ ಆಸೇ ಹೂಳಬೇಕಂದ,— ನೀರ ಬೀಳಲೇ ಇಲ್ಲ. ನೀರಿತ್ತವ್ವಾ, ನೆಲದಾಗಲ್ಲ, ಮಗೀ ದುರುಬಿನ ಹೆಣ್ಣಿನ ಕಣ್ಣಾಗಿತ್ತು. ಜಲ ಎಲ್ಲೀ ತಾಯಿ ಜಲವೆಲ್ಲಿ ? ಮಗೀದುರುಬಿನ ಹೆಣ್ಣಿನ ಕಣ್ಣಲ್ಲೆ.

ಆಯ್ತವ್ವಾ, ಕತೀ ಮುಗೀತು. ಅವರಲ್ಲೇ-ನಾವಿಲ್ಲೆ.

ಕೂಮಾಲಿ : ಅವಯ್ಯಾ, ಸರದಾರೇನಾದ ? ಮಗೀದುರುಬಿನ ಹೆಣ್ಣ ಏನಾದ್ಲು ?

ದುರ್ಗಿ ಇನ್ನೇನಾಗಬೇಕು ? ಎಲ್ಲಾ ಆ ಕುದರಿಂದ್ಯ ಆಯ್ತು ಅಂಬವರ್ಹಾಂಗ ಹಗಲೀ ರಾತ್ರಿ ಅದನ್ನ ಹತ್ತಿ ಓಡ್ಯಾಡಸ್ತಾನ,

ಕೊಮಾಲಿ : ಕತೀ ಮುಂಗೀಲಿಲ್ಲ

ದುರ್ಗಿ : ಇನ್ನs ಮುಗೀಲಿಲ್ಲ. ನಾ ಹೆಂಗ ಮುಂಗಸಲಿ ?

ಕೊಮಾಲಿ : ಅಯ್ ಶಿವನ !

ದುರ್ಗಿ :
ಹೆಂಗs ಹೇಳಲಿ ತಂಗಿ ನಿನಗಾ
ಆ ಕುದರಿ ಬೆರಗಾ ॥

# ಹುಣ್ಣಾದವರು

(ಮಾರನೇ ದಿನದ ಮಧ್ಯಾಹ್ನದ ಸಮಯ. ಗೌಡ್ತಿ, ದುರ್ಗಿ ಪಡಸಾಲೆಯಲ್ಲಿದ್ದಾರೆ.)

ಗೌಡ್ತಿ ಹುಲಿಗೊಂಡ ಈಗೆಲ್ಲಿದ್ದಾನ ?

ದುರ್ಗಿ ಕುದರೀ ಕೊಟ್ಟಿಗ್ಯಾಗ ಕುಂತಾರ್ರಿ.

ಗೌಡ್ತಿ ಊಟ ಮಾಡ್ಯಾನಿಲ್ಲ ?

ದುರ್ಗಿ ಇಲ್ಲರಿ.

ಗೌಡ್ತಿ ಕುದುರೀ ಬೆನ್ನ ಬಿಟ್ಟ ಇಳಧಾನಂಧಾಗಾಯ್ತು.

ದುರ್ಗಿ ಕುದರೀ ಭಾಳ ಕಟದ್ದಾರ ಕಾಣತೈತಿ, ಬಾಯಲೆ ಒಂದ್ಸ ಸವನ ಬುರಂಗ ಬೀಳಾಕ ಹತ್ತ್ಯೇತಿ. ಕಣ್ಣಂತೂ ಕೆಂಡಧಾಂಗ ಉರದ ಉರದ ಉದುರಿ [illegible] ತಾವ.

[illegible] ಆದೊಂದ ಕುಣಗಿ [illegible] ತೈ [illegible] !

ದುರ್ಗಿ ನೀವ್ರೂ ಒಂದ [illegible] ೕನ ?

ಗೌಡ್ತಿ ಹಸಿದಾಗ ತಿಂದಾನೇಳು. [illegible] ಯಾರು ಕರತಂದರು ?

ದುರ್ಗಿ ನಾನ್ಸರಿ.

ಗೌಡ್ತಿ ನಿನಗ್ಯಾರು ಹೇಳಿದ್ದರು ?

ದುರ್ಗಿ ಯಾರಿಲ್ಲರಿ.

ಗೌಡ್ತಿ ನಾಯಿಗಿ ಹೇಳಿದರ, ನಾಯಿ [illegible] ನ್ನ ಬಾಲಕ್ಕ ಹೇಳಿತಂತ. ಮನಿ ಗೆಲಸಾ ಮಾಡಾಕಂತ [illegible] ಇಟಕೊಂಡರ ನಿನ್ನ ಕೈಯಾಗೊಂದ ಆಳ ಬ್ಯಾರೇ ಬೇಕಾಯ್ತು ?

ದುರ್ಗಿ ಕಾಳ ಭಾಳಿದ್ದುವರಿ.

ಗೌಡ್ತಿ ಎಂಟ ದಿನ ಆಗಲಿ. ನೀನ್ಸ ಹಸನ ಮಾಡಬೇಕಿತ್ತು. ಈ ಮನ್ಯಾಗ ನನ್ನ ಮಾತ ನಡೀಬೇಕೊ ? ನಿನ್ನ ಕಾರಭಾರ ನಡೀಬೇಕೊ ? ನಾ [illegible] ಗ [illegible] ಕಳಸಾಕಂತ ಹೋದರ [illegible] ತಿ [illegible] ?

| | |
|---|---|
| ದುರ್ಗಿ | ಆಕಿಗೇನೂ ಕೂಲಿ ಕೊಟ್ಟಿಲ್ಲರಿ. ತಂಗಳನ್ನ ಹಾಕಿದೆ, ಅಷ್ಟ. |
| ಗೌಡ್ತಿ | ತಂಗಳನ್ನಾನೂ ಕೊಟ್ಟಿ; ಚಾಡೀ ಹೇಳಾಕ ಸಂದ್ಧೀನೂ ಕೊಟ್ಟಿ. |
| ದುರ್ಗಿ | ಈ ಮನೀ ಗುಟ್ಟಿನಾಗ ನಂದೂ ಪಾಲೈತಿ. ನಾ ಯಾಕ ಹೇಳೇನ್ರೀ ಎವ್ವಾ? |
| ಗೌಡ್ತಿ | ನೀ ಯಾಕ ಹೇಳಬೇಕ? ಆಕಿಗಿ ಕಣ್ಣಿಲ್ಲಾ? |
| ದುರ್ಗಿ | ಕಾಣಾಕ ಆಕೀನ್ನ ಒಳಗ ಬಿಟ್ಟೇ ಇಲ್ಲರಿ. |
| ಗೌಡ್ತಿ | ಸಾಲದ? ಬೀಗರ ಬಂದ ಒಳಗ ಕುಂತಾರ. ಹುಲಿಗೊಂಡ ಹೊರಗ ಕುದರೀ ಓಡ್ಯಾಡ್ಸಾಕ ಹತ್ಯಾನs. ಇಷ್ಟ ಕಾಣದ? ಇನ್ನ ತಗೊಳ್ಳವಾ: 'ಬೀಗರು ಒಳಗ ಕುಂತಾಗ, ಮನೀ ಅಳಿಯಾ ಹೊರಗ ಕುದರೀ ಕಟೀತಿದ್ದರೇss' ಅಂತ ಡಂಗರಾ ಸಾರತಾಳ. ಈ ಊರ ಮಂದಿ ಬಾಯಾಗ ನಾಲಿಗೀ ಇಟಕೊಂಡಿಲ್ಲs — ಕುಡಗೋಲ ಇಟಕೊಂಡಾರ. ಹಾಕಿ ಎಳದರ, ಹೊಟ್ಯಾಗಿನ ಕರಳ ಪರದ ಹೊರಗ ಬರತಾವ! |
| ದುರ್ಗಿ | ಹೆಂಗೂ ಮದಿವಿ ಗಟ್ಟಿ ಆತಲ್ಲ. ಮತ್ತ ಯಾಕ ಆ ಮಾತು? |
| ಗೌಡ್ತಿ | ಬೀಗರ ಮನಸ್ಸಿನಾಗ ಸಂಶೆ ಉಳೀತs? ಮಂದಿ ನನ್ನ ಮನೀ ಕಡೆ ಬಟ್ಟ ಮಾಡಿ ನಗೋ ಹಾಂಗಾಯ್ತ? ಮನಿತನದ ಮಾನ ಮರ್ಯಾದಿ ನಿನ್ನಂಥ ಆಳಿಗಿ ಹೆಂಗ ತಿಳೀಬೇಕ? |
| ದುರ್ಗಿ | ಗಂಡ ಕರ್‍ಯಾಕ ಬಂದಾನ. ಚಾಡೀ ಹೇಳ್ಯಾಳೆಷ್ಟು? ನಾಲಿಗೀಲೆ ನಿಮ್ಮ ತಟ್ಲಿ ನೆಕ್ಕ್ಯಾಳೆಷ್ಟು, ಬಿಡರಿ. |
| ಗೌಡ್ತಿ | ಗಂಡನ ಜೋಡೀ ಬಾಳ್ವೇ ಮಾಡೋ ಹೆಂಗಸೇನs ಅದು? ಇಡೀ ಊರಿಗೇ ಬೆದಿ ಹಚ್ಚಿ ಮೋಜಾ ನೋಡೋ ಜಾತಿ. ಅವರಪ್ವ ನನಗೊತ್ತಿಲ್ಲಂದ್ಯಾ? ಆಕೀ ಗಂಡ ಕರ್‍ಯಾಕ ಎಂದ ಬಂದಾನ? |
| ದುರ್ಗಿ | ಇಂದs. |
| ಗೌಡ್ತಿ | ಕರಕೊಂಡ ಹೋದ್ನ? |

(ಹೊರಗೆ ಗಲಾಟೆ ಕೇಳಿಸುತ್ತದೆ. ಅವ್ವಗ ಹೇಳ್ತೀನೆಂದು ಪಾರೋತಿ ಹೇಳುತ್ತಿದ್ದಾಳೆ.)

ಹೊರಗೇನ ಗದ್ದಲದು? ಏನ್ರೀ, ಪಾರೋತಿ, ಶೀಲಕ್ಕಾ?

(ಪಾರೋತಿ, ಶೀಲಕ್ಕ ಒಳಬರುವರು.)

| | |
|---|---|
| ಪಾರೋತಿ | ನೋಡವ್ವಾ... |
| ಶೀಲಕ್ಕ | (ನಡುವೆ ತಡೆದು) ನಾ ಹಾಂಗಂದಿಲ್ಲ. |
| ಪಾರೋತಿ | ಸುಳ್ಳ ಹೇಳ್ತೀಯೇನ ? |
| ಶೀಲಕ್ಕ | ನಾ ಹಾಂಗಂದಿಲ್ಲ, ಬೇಕಾದರ ಮಾವನ್ನ ಕೇಳು. |
| ಪಾರೋತಿ | ಓತಿಕ್ಯಾತಿಗೊಂದು ಬೇಲೀ ಸಾಕ್ಷಿ, –ನೋಡವ್ವಾ.... |
| ಗೌಡ್ತಿ | ಏನ್ರೇ ಅದು ? |
| ಪಾರೋತಿ | ಶೀಲಿ ಕುದರೀ ಹತ್ತತಾಳಂತ. |
| ಗೌಡ್ತಿ | ಬರೋಬ್ಬರಿ ಹೇಳು, ಏನ ಹೇಳಬೇಕಂತಿ ? |
| ಪಾರೋತಿ | ಅವ ಅಂಗೀ ಕಳದ ಕುದರೀ ಮ್ಯಾ ತಿಕ್ಕತಿದ್ದಾ, |
| ಗೌಡ್ತಿ | ಹೂ. |
| ಪಾರೋತಿ | ಈಕಿ ಅವನ ಬೆನ್ನ ನೋಡಿಕೋತ, ಕುದರೀ ಹತ್ತತೀನಿ ಮಾವಾ ಅಂತಿದ್ಲು. |
| ಗೌಡ್ತಿ | ಅವ ಏನಂದ ? |
| ಪಾರೋತಿ | ಅಷ್ಟರಾಗ ನಾ ಹೋದೆ |
| ಗೌಡ್ತಿ | ದುರ್ಗಿ ಆ ಬಾರಕೋಲ ತತಾ. |
| ದುರ್ಗಿ | ಸಣ್ಣ ಮಗಳು, ಏನೋ ಆಟಕ್ಕ ಅಂದಿರಬೇಕು, ಬಿಡ್ರಿ ಎವ್ವಾ. |
| ಪಾರೋತಿ | ಆಹಾ ! ಸಣ್ಣ ಮಗಳು ! ಆಗಲೇ ಕುದರೀ ಹತ್ತಾಕ ನಿಂತಾಳ ! |
| ದುರ್ಗಿ | ಏನಂತ ಮಾತಾಡ್ತಿ ಬಿಡ್ಸ ಪಾರೋತಿ. ಶೀಲಕ್ಕ, ನಿನ್ನ ಕ್ವಾಣಿಗಿ ನಡಿ. |
| ಗೌಡ್ತಿ | ದುರ್ಗೀ, ಸಿಕ್ಕ ಸಿಕ್ಕಾಗ ಬಾಯಿ ಹಾಕಬ್ಯಾಡಂತ ಹೇಳಿಲ್ಲಾ ? ನೀನು ಈ ಮನೀ ಆಳು. ನಿನ್ನ ಜಾಗ ಚಪ್ಪಲೀ ಹಂತ್ಯಾಕಿನ ಮ್ಯಾಲಿ. ಈ ಮನೀ ವ್ಯವಹಾರದಾಗ ಬರಬ್ಯಾಡ. ಪ್ರಸಂಗ ಬಂದಾಗ ನಾ ಹೇಳತೀನಿ, ಆಗ ಬೊಗಳೀಯಂತ. ಅಲ್ಲೀತನಕ ಆ ಮೂಲ್ಯಾಗ ಬಿದ್ದಿರು. |
| | (ತಾನೇ ಹೋಗಿ ನೇತು ಹಾಕಿದ ಬಾರುಕೋಲು ತಗೊಂಡು) |
| | ಏನ್ಸ ಶೀಲಿ ? |

ಶೀಲಕ್ಕ : (ಹೆದರಿ) ಖರೇನ್ವs, ನಾ ಹಾಂಗಂದಿಲ್ಲವ್ವಾ....

ಗೌಡ್ತಿ : ಕೊಟ್ಟಿಗ್ಗ್ಯಾದರೂ ಹೋಗಿದ್ದೋ, ಇಲ್ಲೋ ?

ಶೀಲಕ್ಕ : ಕೋಳಿ ತತ್ತೀ ಹಾಕೇತೇನಂತ ನೋಡಾಕ ಹೋಗಿದ್ದೆ.

ಗೌಡ್ತಿ : ಯಾಕ, ಅದನೆಂದೂ ಕಂಡಿಲ್ಲೇನ ?

(ಥಟ್ಟನೆ ಬಾರುಕೋಲಿನಿಂದ ಶೀಲಕ್ಕನನ್ನು ಕಟೆಯುವಳು. ಏಟು ಬಿದ್ದ ಶೀಲಕ್ಕ ಅಳತೊಡಗುವಳು.)

ಕುದರೀ ಹತ್ತತೀ ಏನs ಬೋಸಡೆ ? ಹತ್ತಿದ ಮ್ಯಾಲ ಕುದರೀ ಹೆಂಗ ಕಟೀಬೇಕಂತ ಹೇಳಿಕೊಡಲಿ ?

(ಮತ್ತೆ ಕಟೆಯುವಳು. ದುರ್ಗಿ ಬಂದು ಗೌಡ್ತಿಯ ಕೈಯಲ್ಲಿಯ ಬಾರುಕೋಲು ಕಸಿಯುವಳು.)

ದುರ್ಗಿ : ದೊಡ್ಡವರಾಗಿ ನಿಮಗೂ ತಿಳಿಯಾಣೆಲ್ಲೇನ ಬಿಡ್ರೀಯೆವ್ವ.

ಗೌಡ್ತಿ : ದುರ್ಗೀ, ಮೂವತ್ತ ವರ್ಷ ಈ ಮನೀ ಎಂಜಲಾ ತಿಂದೀದಿ, —ಗೊತ್ತಿಲ್ಲಾ ನಿನಗ ನಾ ಯಾರ ಬುದ್ಧೀಮಾತ ಕೇಳಾಣೆಲ್ಲಂತ ?

(ಶೀಲಕ್ಕನಿಗೆ)

ಏ, ನಿನ್ನ ಕ್ವಾಣೆಗಿ ಹೋಗು. ಹಾಸಿಗ್ಯಾಗ ಬಿದ್ದಕೊಂಡ ಅಳು. ಕೇಳಿಸ್ತಿಲ್ಲ ? ಪಾರೋತೀ, ಔಷಧಿ ತಗೋ ಯಾಳೇ ಆಗೇತಿ, ನೀ ಹೋಗು.

(ಶೀಲಕ್ಕ ಅಟ್ಟದ ಮೇಲಿನ ತನ್ನ ರೂಮಿಗೂ, ಪಾರೋತಿ ರಂಗದ ಬಲಭಾಗದ ತನ್ನ ರೂಮಿಗೂ ಹೋಗುವರು.)

ಗೌಡ್ತಿ : ದನ, ದನಾ ಕಾಯೋದ ಬೇಕು; ಈ ಮಕ್ಕಳ್ನ ಕಾಯೋದ ಬ್ಯಾಡಾ. ಸಾಲದ್ದಕ್ಕ ಈ ಊರ ಮಂದೀ ಕಣ್ಣೆಲ್ಲಾ ನನ್ನ ಮನೀ ಮ್ಯಾಲs. ಇವರೇನ ತಿಳಕೊಂಡಿದ್ದಾರು. ಹೆಣಮಗಳು, ಹೆಂಗ ನಿಭಾಯಿಸ್ಯಾಳು ಅಂತ. ತಾಳು ತಾಳು, ನನ್ನ ಬಂದೂಕಿನ ಗುರಿ ಎಂದಿಗೂ ಹುಸಿ ಹೋಗಿಲ್ಲಂತ, ಈ ಭಾಡೇರಿಗೆಲ್ಲಾ ಒಂದ ದಿನ ತೋರಿಸ್ತೇನಿ.

ಪಾರೋತಿ : (ರೂಮಿನ ಒಳಗಡೆಯಿಂದ) ಎಪ್ಪಾ,

ಗೌಡ್ರ : ಮತ್ತೇನ ?

ಪಾರೋತಿ : (ಹೊರಬಂದು) ನನ್ನ ಪಾವುಡರ ಡಬ್ಬಿ ಇಲ್ಲೆವ್ವಾ

ಗೌಡ್ರ : ಅಲ್ಲೇ ಇದ್ದೀತ ಹುಡಿಕಿ ನೋಡು.

ಪಾರೋತಿ : ನೋಡಿದೆ. ಎಲ್ಲೂ ಇಲ್ಲ. ಹರೀಪತ್ತ ಚಂಪಿ ನನ್ನ ಕಣ್ವಾಣೆಗಿ ಬಂದಿದ್ಲು ...

ದುರ್ಗಿ : ಬಿಡ್ವ ಪಾರಕ್ಕ, ಚಾಡೀ ಹೇಳಾಕಲ್ದ್ವ ನೀ ಬಾಯಿ ತಗ್ಯೊದ್ವ ಇಲ್ಲ. ಚಂಪಿ ಏನ ಮಾಡಿದರೂ ಕತೀ ಕಟ್ತಿ.

ಪಾರೋತಿ : ನೀ ಬಾಯ್ಮುಚ್ಚ್ಗ. ಆಳಂದ ಮ್ಯಾಲ ಆಳಿನ್ಹಾಂಗ ಇರಬೇಕು. ಕೆತ್ತಂದರ ಕೆತ್ತಬೇಕು, ಮೆತ್ತಂದರ ಮೆತ್ತಬೇಕು.

ಗೌಡ್ರ : ವಯಸ್ಸಿಗಾದರೂ ಕಿಮ್ಮತ್ತ ಕೊಡಾಕ ಕಲಿಯೋ ಪಾರೋತಿ. ದುರ್ಗಿಗಿ ನಾ ಅಂತೀನಂತ ನೀನೂ ಅನ್ನೋದಾ ?

ಪಾರೋತಿ : ನೀವಿಬ್ಬರೂ ಗುಟ್ಟ ಹಂಚಿಕೊಂಡೀರಿ, ಬೇಕಾದರ ನೀ ಕಿಮ್ಮತ್ತ ಕೊಟ್ಟುಕೊ. ಆಕೀ ಮಾತಿಗಿ ಮುನ್ನೂರು ರುಪಾಯಿ ಕೊಡು, ಯಾರ ಬ್ಯಾಡಾಂತಾರ ? ನನ್ನ ಉಸಾಬರಿಗಿ ಬಂದರ, ನಾ ಅನ್ನುವಾಕೀ.

ಗೌಡ್ರ : ಬಾಯಿ ಮುಚ್ಚತೀಯೋ ? ನಿನಗೂ ಬಾರಕೋಲ ಬೇಕೊ ?

ಪಾರೋತಿ : ಬಾರಕೋಲ್ಯಾಕ, ಬಂದೂಕ ತಗೊ.

(ಅಳುತ್ತ)

ಈ ಮನ್ಯಾಗ ನನ್ನ ಮಾತಂದರ ಎಲ್ಲಾರ ಬದ್ದಿ ಉರೀತೈತಿ. ಯಾಕ ? ನಾ ಇದ್ದದ್ದ ಇದ್ಹಾಂಗ ಹೇಳ್ತೀನ್ನೋಡು. ಅಪ್ಪಾ ಇದ್ದಿದ್ದರ ..

ಗೌಡ್ರ : ಚಂಪೀ, ಏ ಚಂಪೀ ..

ಪಾರೋತಿ : ನಿನ್ನ ಮಾತ ಆಕಿಗೆಲ್ಲಿ ಕೇಳಸ್ತಾವ ? ಮಾವನ್ನ ನೆನೀತಾ ಬೆರಳ ಸೀಪಿಕೋತ ನಿಂತಿರತಾಳ.

ಗೌಡ್ರ : ಏನಂಬೊ ಮಾತಾಡ್ತಿಯೆ ? ಚಂಪಿ ನಿಂತರ ಮಾವನ್ನೋಡಿ ನಿಂತಳಂತಿ, ಕುಂತರ ಮಾವನ್ನೋಡಿ ಕುಂತಳಂತಿ. ಬೇಕ, ಬ್ಯಾಡಾದ್ದೆಲ್ಲಾ ಮಾತಾಡಿ ಮನೀತುಂಬ ಯಾಕ ನಿನ್ನ ನಾರ್ಯೋ

ಉಗಳ ಸಿಡಸ್ತೀಯೆ ? ಆಕಿ ಈ ಮನ್ಯಾಗ ಇರಬೇಕಂತೀಯೋ, ಬ್ಯಾಡಂತೀಯೊ ? ಹಿರೀ ಅಕ್ಕ ಅಂದರ ಹಿರೀ ಹೊಳೀ ಹಾಂಗಿರಬೇಕ. ಹೆಚ್ಚೂ ಕಮ್ಮಿ ಆದರ ನೋಡಿಕೊಳ್ಳಾಕ ನಾ ಇಲ್ಲಾ ? ಅವಳೇನು, ನಿನ್ನ ಆಸ್ತೀ ಒಳಗ ಪಾಲಾ ಬೇಡಿದಳ?

ಪಾರೋತಿ : ಆಸ್ತಿ ಬೇಡಿದರ ಕೊಟ್ಟೇನು, ನನ್ನ ಹಾಸಿಗ್ಯಾಗ ಪಾಲಾ ಬೇಡತಾಳ ; ಈಕಿನ್ನ ತಂಗಿ ಅಂತ ಹೆಂಗನ್ನಲಿ ? ನನ್ನ ಎದ್ಯಾಗ ಹಿಂತಾ ದೊಡ್ಡ ಹುಣ್ಣ ಮಾಡ್ಯಾಳ. ಮಾತಾಡಿದಾಗೊಮ್ಮಿ ನಾ ಅಲ್ಲ, ನನ್ನ ಹುಣ್ಣ ಮಾತಾಡತೈತಿ. ಆದಕ್ಕs ನನ್ನ ಮಾತ ನಿಮಗ ನಾರತಾವ.

(ಅಳುವಳು)

ಗೌಡ್ತಿ : ಆಕಾಶ ಕಳಚಿ ಬೀಳೋವಂಥಾದ್ದೇನೂ ಆಗಿಲ್ಲ. ಈಗಲೂ ನೀ ಬಾಯಿ ಮುಚ್ಚಿದರ, ಬೀಳೋ ಆಕಾಸ ಅಲ್ಲೇ ನಿಲ್ಲಸ್ತೀನಿ, ಬಾಯಿ ಮುಚ್ಚತಿ ? ಚಂಪೀ, ಏ ಚಂಪಿ,

(ಚಂಪಿ ಹೊರಬರುವಳು)

ಈಕೀ ಪಾವುಡರ ಡಬ್ಬೀ ತಗೊಂಡೀಯೇನ ?

ಚಂಪಿ : ಇಲ್ಲ.

ಗೌಡ್ತಿ : ಸುಳ್ಳ ಹೇಳಿದರ ಚರ್ಮಾ ಸುಲೀತೀನಿ.

ಚಂಪಿ : ನಾ ತಗೊಂಡಿಲ್ಲ.

ಗೌಡ್ತಿ : ದುರ್ಗೀ, ಹೋಗಿ ಆಕೀ ಕ್ವಾಣ್ಯಾಗ ಹುಡುಕು. ನಾ ಶೀಲೀ ಕ್ವಾಣ್ಯಾಗ ಹುಡುಕತೀನಿ.

(ಗೌಡ್ತಿ ಇನ್ನೇನು ಮೆಟ್ಟಿಲು ಹತ್ತಬೇಕೆನ್ನುವಷ್ಟರಲ್ಲಿ ಶೀಲಕ್ಕ ದಡಬಡ ಇಳಿಯುತ್ತ ಬಂದು ಪೌಡರ ಡಬ್ಬಿ ತಂದು ಗೌಡ್ತಿಯ ಮುಂದಿನ ಮೆಟ್ಟಿಲ ಮೇಲೆ ಇಟ್ಟು ಹೊರಡುವಳು. ಗೌಡ್ತಿಯ ಕೋಪ ನೆತ್ತಿಗೇರುತ್ತದೆ.)

ಗೌಡ್ತಿ : ನೀ ಯಾಕ ಅದನ್ನ ತಗೊಂಡಿದ್ದಿ ?

ಶೀಲಕ್ಕ : ವಾಸನೆ ನೋಡಾಕ ತಗೊಂಡಿದ್ದೆ.

(ಎಂದು ಹೇಳಿ ತನ್ನ ರೂಮಿನಲ್ಲಿ ಹೊಕ್ಕು ಬಾಗಿಲಿಕ್ಕಿಕೊಳ್ಳು ವಳು. ಗೌಡ್ತಿ ಕೆಕ್ಕರಿಸಿ ಅವಳನ್ನೇ ನೋಡುತ್ತಿರುವಂತೆ ಪಾರೋತಿ ಬಂದು ಆ ಡಬ್ಬಿಯನ್ನು ತೆಗೆದುಕೊಂಡು ಹೋಗು ವಳು. ಗೌಡ್ತಿ ಮತ್ತೆ ಬಂದು ಆಸನದಲ್ಲಿ ಕುಸಿಯುವಳು )

ದುರ್ಗಿ : (ಸಹಾನುಭೂತಿಯಿಂದ) ಈ ಮನಿ ಎಂದ ತಂಪಾಗತೈತೊ !

ಗೌಡ್ತಿ : ಈಗೇನೂ ಈ ಮನೀಗಿ ಬೆಂಕಿ ಬಿದ್ದಿಲ್ಲ ಹೆಣಮಗಳs ; ಒಂದ ವೇಳೆ ಬಿತ್ತಂತ ತಿಳಕೊ; ಆಗಲೂ ಕಣ್ಣೀರ ಸುರಿಸಿ ಆರಸ ಬಾ ಅಂತ ನಿನ್ನ ಕರೆಯೋಣಿಲ್ಲ, ಆಯ್ತು ?

ದುರ್ಗಿ : ಏನಂತ ಮಾತಾಡ್ತೀರೆವ್ವ, ಇದs ಮನ್ಯಾಗ ನಾನೂ ಮುದುಕ್ಯಾಗೀನಿ...

ಗೌಡ್ತಿ : (ಹೊರಗೆ ಯಾರೋ ಬಂದುದನ್ನು ಗಮನಿಸುವಳು) ಆದರಿದು ನಿನ್ನ ಮನಿ ಅಲ್ಲ; ನಂದು. ನನ್ನ ಹಾಂಗ ನೋಡ ಬ್ಯಾಡ, ಮತ್ತ ಬಾಯಿ ತಗೀಬ್ಯಾಡ. ನೀ ಇರೋದು ಈ ಮನೀ ಆಳಾಗಿ; ಅಡಿಗೀ ಮಾಡಾಕ, ಕಸಗೂಡಸಾಕ, ಅದು ಇದು ಕೆಲಸಾ ಮಾಡಾಕ. ಈಗೊಂದ ಸಣ್ಣ ಕೆಲಸ ಮಾಡ್ತೀ ಯೇನು ? ಹೊರಗ್ಯಾರೋ ಬಂದಾರ, ಯಾರು, ಯಾಕ ಬಂದಾರಂತ ಕೇಳಿ, ಒಳಗ ಕರಕೊಂಬಾ.

(ದುರ್ಗಿ ಹೊರಗೆ ಹೋಗುವಳು. ಗೌಡ್ತಿ ತನ್ನ ಪಲ್ಲಂಗದ ಸುತ್ತ, ದಿನಾ ಹೊರಗಿನವರು ಬಂದಾಗ ಕಟ್ಟಿಕೊಳ್ಳುವಂಥ ದಾದ್ದರಿಂದ ಸುಲಭವಾಗಿ ಕಟ್ಟಬರುವ ಒಂದು ಪರದೆ ಕಟ್ಟಿ ಕೊಳ್ಳುತ್ತಾಳೆ. ಈಗವಳ ಮುಖ ಮಾತ್ರ ಕಾಣಿಸುತ್ತದೆ. ಅಷ್ಟರಲ್ಲಿ ದುರ್ಗಿ, ಅವಳ ಹಿಂದಿನಿಂದ ರಾಯಪ್ಪ, ನಾಲ್ಕು ಜನ ಗರಡೀ ಹುಡುಗರು ಬಂದು ಬಾಗಿಲ ಬಳಿಯೇ ನಿಂತುಕೊಂಡು ಗೌಡ್ತಿಗೆ ನಮಸ್ಕಾರ ಮಾಡುತ್ತಾರೆ. ಅವರ ಹಿಂದಿನಿಂದ ಕೊಮಾಲಿ ಮೆಲ್ಲಗೆ ಬರುವಳು.)

ರಾಯಪ್ಪ : ಶರಣ್ರೀಯೇವ್ವ.

ಗೌಡ್ತಿ : ನಿಂತಕೊಂಡs ಹೇಳು, ಏನ ತಕರಾರು ? ಯಾರ ನೀನು ?

ರಾಯಪ್ಪ : ಎವ್ವಾ ಗೌಡ್ತಿ, ಕೊಮಾಲಿ ನನ್ನ ಹೆಂಡ್ತಿ. ನಡ್ಯಾಕ ಕರಕೊಂಡ ಹೋದರ ಹೇಳದs ಕೇಳದs ಓಡಿಬಂದಾಳ,

ಗೌಡ್ತಿ : ಕೊಮಾಲೀ ಗಂಡನ್ನs ನೀನು ?

ರಾಮಪ್ಪ : ಹೂನ್ರಿ. ಈಗ ನನ್ನ ಜೋಡಿ ಬರಾಕ ಒಲ್ಲೆ ಅನ್ನಾಕ ಹತ್ಯಾಳ್ರಿ. ಬುದ್ಧೀರೀತಿ ಹೇಳಿ ಕಳಿಸಿಕೊಡ್ರೀಯಪಾ ಅಂತ ಗೌಡ್ರಿಗಿ ಹೇಳಿದರ, — ನಿನ್ನಂಥವನ ಜೋಡಿ ಅಥೆಂಗ ಇದ್ದಾಳೋ – ? ಅಂತಾರ.

ಗೌಡ್ತಿ : ಮಾಡಿಕೊಂಡ ಗಂಡ ಅಂತ್ರಿ, ಕಟ್ಟಿ ಹಾಕಿ ಆಳಾಕ ಆಗವೊಲ್ದು ಅಂದರ ಅನ್ನದs ಇನ್ನೇನೊ ಮಾಡತಾರ ? ದಯಾಮಾಯದ ಕಾಲ ಅಲ್ಲಪಾ ಇವು. ಇಂಥಾ ದಿಂಡೇರ್ನ ಆಳೋದಂದರ, ಸಣ್ಣ ಮಾತಲ್ಲ. ಏಳತಾ ಬೀಳತಾ ಸೊಂಟದ ಮ್ಯಾಲ ಎರಡೆರಡ ಬೆಲ್ಲಬೇಕು. ಬರೀ ನೀನs ಮಾತಾಡಬೇಕು. ಮಾತಾಡೋವಾಗೆಲ್ಲಾ ಆಕೀ ಕಡೆ ಮುಖ ಮಾಡಿ ಕಿರಚಬೇಕು. ಕಿರಿಚಿದಾಗೆಲ್ಲಾ ನಿನ್ನ ಉಗುಳ ಆಕೀ ಮಾರೀ ಮ್ಯಾಲ ಸಿಡೀತಿರಬೇಕು. ತಿಳೀತ ? ಕಟ್ಟಿ ಆಳೋದಂದರ ಇದು.

(ಕೊಮಾಲಿಗೆ)

ಏಯ್, ನಿನ್ನs ಕೊಮಾಲಿ ಮಾಡಿಕೊಂಡ ಗಂಡನ್ನ ಬಿಟ್ಟು ಓಡಿ ಬಂದೀದಿ, ನಾಚಿಕಿ ಬರೋಣಿಲ್ಲಾ ? ನಿನ್ನ ನೋಡಿ ಊರ ಹುಡಿಗೇರೆಲ್ಲಾ ಹಾದಿಗೆಟ್ಟಾರು. ಸುಮ್ಮನ ಗಂಡನ ಮನೀಗಿ ಹೋಗಿ ಬಾಳ್ವೆ ಮಾಡು. ತಿಳೀತಿಲ್ಲ ? ಹಿಂಗ್ಯಾಗ ಪುಂಡತನ ಮಾಡಿದರ ಈ ಊರಾಗಿನ ಎಲ್ಲಾರೂ ನಿನ್ನ ಮಾರೀ ಕಡೆ ಉಗಳೋಹಾಂಗ ಮಾಡೇನು. ಇನ್ನೇನ ನೀ ಹೇಳೋ ಜರೂರಿಲ್ಲ. ನಿಂತ ಕಾಲ ಮ್ಯಾಲ, ಈಗಿಂದೀಗ ಓಡಾಡು. ಹೊರಬೀಳೀಗ ...

(ಕೊಮಾಲಿ ಹೊರಡುವಳು. ಉಳಿದವರು ಗೌಡ್ತಿಗೆ ನಮಸ್ಕರಿಸಿ ಹೋಗುವರು.)

# ಕರುಳು - ಹಂಚಿಕೊಂಡವರು

(ದುರ್ಗಿ ಕಾಳು ಹಸನು ಮಾಡಂತ್ತಿದ್ದಾಳೆ. . ಪಾರೋತಿ ಮುಖಕ್ಕೆ ದಟ್ಟವಾಗಿ ಪೌಡರ್ ಬಳಿದುಕೊಂಡು ತಲೆಬಾಚಿ ಕೊಳ್ಳುತ್ತ ಬರುತ್ತಾಳೆ.)

ದುರ್ಗಿ : ಮೊದಲ್ಕs ಬಿಳಿಚಿಕೊಂಡೀದಿ. ಮತ್ತ್ಯs ಬೂದಿಯಂಥಾ ಪಾವುಡರ ಯಾಕ ಬಡಕೊಂಡೇ ನಮ್ಮವ್ವಾ ?

ಪಾರೋತಿ : ಶಾರದಾಗ ಅದೆಂಥಾದೋ ಕೆಂಪ ಪಾವುಡರ್ ಸಿಗತೈತಂತ, ಇವ ಗೋಕಾಂವಿಗಿ ಹೊಂಟ ನಿಂತಾಗೆಲ್ಲಾ ತಗೊಂಬಾ ಅಂತ ಎಷ್ಟ ಸಲ ಹೇಳೇನಿ, — ಒಂದ ಸರ್ತೀನೂ ತರಲಿಲ್ಲ. ಅದನ್ನ ಹಚ್ಚಿಕೊಂಡರ ಗೊಂಬೀ ಹಾಂಗ ಕಾಣಸ್ತಾರಂತ ಹೆಂಗಸರು.

ದುರ್ಗಿ : ಅದೆಲ್ಲಾ ನಿಮಗ್ಯಾಕ್ರೀಯೆವ್ವಾ ? ಹೊಟ್ಟ್ಯಾಗ ಮಗರಾಮ ಮೂಡಲಿ, ನಿನಗ್ಯ ಹೆಂಗ ಬಣ್ಣ ಬರತೈತಿ, ನೋಡೀಯಂತ.

ಪಾರೋತಿ : ಈ ರೋಗ ನನ್ನ ಬಿಡಬೇಕಲ್ಲ. ಔಷಧ ಕುಡದ ಕುಡದ ನನ್ನ ನಾಲಿಗ್ಯಾಗಿನ ರುಚೀನ್ಯs ಹೋಗೇತಿ. ಇವಗೊಂದೀಟಾದರೂ ಕಾಳಜಿ ಐತೇನ, ಹೇಳು. ಹಗಲಿ ರಾತ್ರಿ ಆ ಕುದರಿ ಮ್ಯಾ ತಿಕ್ಕತಿರತಾನ. ಅವ್ವಾಗ ಇಂದ ಹೇಳೇಬಿಡತೇನಿ, ಆ ಕುದರೀ ಈ ವಾರ ಮಾರಾಕ್ಯ ಬೇಕಂತ.

ದುರ್ಗಿ : ಊರ ಗೌಡಂದಮ್ಯಾಲ ಹತ್ತಾಕೊಂಡ ಕುದರಿ ಬ್ಯಾಡಾ ?

ಪಾರೋತಿ : ಬೇಕಾದರ ಹಜಾರ ಕೊಟ್ಟ ಬ್ಯಾರೇ ಕುದರೀ ಕೊಳ್ಳಲೀ, ಆದರ ಇದು ಬ್ಯಾಡಾ. ಇದರ ಕರೀಕಲ್ಲಿನಂಥಾ ಮೈಯಿ, ಪೇಸಿ ಕಣ್ಣಾ, ಓಸರ ಸೋರೋ ಬಾಯೀ, — ಅವಯ್ಯಾ, ಅಧೆಂಗ ಅದರ ಮ್ಯಾಲ ಹತ್ತಿ ಹೊಡೀತಾನೊ ! ನೆನಪಾದರ ಸಾಕು, ಉಂಡದ್ದ ತಿರಿಗಿ ಬಾಯಿಗಿ ಬರತೈತಿ.

ದುರ್ಗಿ : ಅಂಥಾಂಗ ಔಷಧ ತಗೊಂಡಿ ?

ಪಾರೋತಿ : ಮಾರವಾಗಲಿ ತಡೀಯೋ ಹಡಹವ್ವಾ !

(ಶೀಲಕ್ಕ ಹೊರಗಿನಿಂದ ಕಬ್ಬು ತಿನ್ನುತ್ತ ಬರುವಳು.

ಪಾರೋತಿ : ನಿನಗೆ ಕಬ್ಬೆಲ್ಲಿ ಸಿಕ್ಕಿತ ?

ಶೀಲಕ್ಕ : ಮಾವ ಕೊಟ್ಟ.

ಪಾರೋತಿ : ನನಗಷ್ಟ ಕೊಡು.

ಶೀಲಕ್ಕ : ನಿನ್ನ ಮೈಗಿ ಕಬ್ಬ ಒಳ್ಳೇದಲ್ಲಂತ ಡಾಕ್ಟರ ಹೇಳಿಲ್ಲಾ ?

ಪಾರೋತಿ : ನಿನಗೂ ಕಬ್ಬ ತಂದ ತಾದ ಕೊಡಾಕ ಹತ್ತಿದನ್ಸ ಅವ ? ಅಪ್ಪ ಬರಲಿ.

(ಚಂಪಿ ತನ್ನ ರೂಮಿನತ್ತ ಹೊರಬಂದು)

ಚಂಪಿ : ಶೀಲೀ, ನನಗಷ್ಟ ಕಬ್ಬ ಕೊಡ.

(ಶೀಲಿ ಒಂದು ಗಣಿಕೆ ಮುರಿದು ಚಂಪಿಯುತ್ತ ಎಸೆಯುವಳು. ಇಬ್ಬರೂ ತಿನ್ನ ತೊಡಗುವರು. ಪಾರೋತಿ ಕುದಿಯುವಳು.)

ಪಾರೋತಿ : ತಿಂತಾವ ಹೆಂಗ ನೋಡು, ಕಸಾಪಸಾ ಕಸಾಪಸಾ ಅಂತ.

ಚಂಪಿ : ನೋಡಾಕ ಆಗದಿದ್ದರ ಎದ್ದ ಒಳಗ ಹೋಗು. ಇಲ್ಲಾ ಮುಚ್ಚಿಕೊಂಡ ಬಿದ್ದಿರು.

ಪಾರೋತಿ : ಬಾಯ್ಮುಚ್ಚ ಭೋಸಡೆ. ನನ್ನ ಜೋಡೀ ನಿಂದೇನ್ಸ ಸಲಿಗಿ ?

ದುರ್ಗಿ : ಬಿಡ್ಸ ಪಾರೋತಿ, ಕಬ್ಬ ತಿಂದರೇನಾತು ?

ಪಾರೋತಿ : ಮತ್ತ್ಯs ? ಮುಚ್ಚಿಕೊಂಡ ಬಿದ್ದಿರು ಅಂತಾಳ ನೋಡಲ್ಲ.

ಚಂಪಿ : ಮಾತಾಡ್ತ ಮಾತಾಡ್ತ ಜೀವ ಹೋದೀತು ಅಂತ ಹೇಳಿದೆ, ಅಷ್ಟs.

ಪಾರೋತಿ : ಎಂದ ಸಾಯತೀನೋ ಅಂತ ಹಾದಿ ನೋಡಾಕ ಹತ್ತೀದಿ. ನಾ ಸತ್ತರೂ ನಿನಗ ಮಾವ ದಕ್ಕಾಣಿಲ್ಲ, ತಿಳಕೊ.

ಚಂಪಿ : ದಕ್ಕತಾನೋ ಇಲ್ಲೊ—ತಿಳಕೊಳ್ಳಾಕಾದರೂ ನೀ ಸಾಯ ಬೇಕಲ್ಲ !

ಪಾರೋತಿ : ಥೂ ಹೊಲ್ಯಾಗ ಹುಟ್ಟಿದ್ದs.

ದುರ್ಗಿ : ಒಂದs ಕರಳ ಹಂಚಿಕೊಂಡೀರಿ, ತಂಗೇರಿಗಿ ಹಿಂಗ ಅಂದರ ಹೆಂಗs ಪಾರೋತಿ ?

ಪಾರೋತಿ : ಅನ್ನೋ ಹಾಂಗ ಮಾಡ್ತಾಳಲ್ಲ, ಅದ್ಕೇಳು.

ಚಂಪಿ : ಹೆಂಗೂ ಸಾಯ್ತೀಯಲ್ಲಾ, ಅಂತ ನಂಬಿ ಸುಮ್ಮಿರತೀನಿ, ಇಲ್ಲದಿದ್ದರ...

ದುರ್ಗಿ : ಏನಂಬೋ ಮಾತ್ಯ ಚಂಪಕ್ಕಾ ?....

ಪಾರೋತಿ : ನೋಡ ದುರ್ಗೀ, ಹೆಂಗ ಮಾತಾಡತಾಳು ? ಅವ್ವ ಬರಲಿ ಭೋಸಡೇ, ರಾತ್ರಿ ಕುಬಸದ ಗುಂಡೇ ಬಿಚ್ಚಿ ಬಿದ್ದಕೊಂಡಿರಶೀ ಅಂತ ಹೇಳದಿದ್ದರ ಹೇಳು,....

ಚಂಪಿ : ಬೇಕಂದರ ಬೆತ್ತಲೆ ಮಲಗತೇನ್ಯ, ಕೇಳಾಕ ನೀ ಯಾರು ?

ದುರ್ಗಿ : ಗಪ್ಪಾಗಿ ಕುಬಸದ ಗುಂಡೆ ಬಿಚ್ಚಿದರ ಏನಾತ್ಯ ಪಾರೋತಿ ?

ಪಾರೋತಿ : ಗಪ್ಪಾಗಿ ಬೀಳತಾಳೋ, ನನ್ನ ಗಂಡ ಬರಲೆಂತ ಬೀಳತಾಳೊ !

ಚಂಪಿ : ನನಗ ಮೈ ಐತಿ, ಮೈಗಿ ಮದಾ ಐತಿ, ಬಿದ್ದಿರತೇನ್ಯ. ನಿನಗೇನೈತಿ ? ಒಣಾ ಕಟಿಗೀ ಹಂತಾ ನಾಕ ಎಲುವ, ಹಾಳ ಬಾವೀ ಹಂತಾ ಎರಡ ಕಣ್ಣಾ !

ಪಾರೋತಿ : ಕೇಳದೇನ್ಯ ದುರ್ಗಿ ಹೆಂಗ ಮಾತಾಡತಾಳು ?

ದುರ್ಗಿ : ದಿನ ಬೆಳಗಾದರ ನಿಮ್ಮ ಜಗಳ ಕೇಳಿ ಕೇಳಿ ಸಾಕಾತ್ಯ ಎವ್ವಾ! ಎಷ್ಟಂದರೂ ಅಕ್ಕ, ಒಂದೆರಡ ಮಾತ ಆಡಿರಬೇಕು. ಸೇರಿಗಿ ಸವ್ವಾ ಸೇರಂತ ನೀನೂ ಆಡೋದೇನಾ ಚಂಪಕ್ಕಾ ?

ಚಂಪಿ : ವೈವಾಚಾರ ಮಾಡಾಕ ಈಕಿನ್ಯಾರ ಕರಸಿದರ ? ಬಂದ್ಮ್ಯ ತಂದೊಂದ ಸೋ ಸೇರಸಾಕ.

ಪಾರೋತಿ : ಮಾತಾಡ ಮಾತಾಡ. ದೇವರ ಚೆಲಿವಿಕಿ ಕೊಟ್ಟಾನ. ಸುದ್ದ ಮೂಗಿನಾಕಿ ಹೆಂಗ ಮಾತಾಡಿದರೂ ಚಂದ್ಯ.

ಶೀಲಕ್ಕ : ಅಷ್ಟಾದರೂ ಇರಲಿ ಬಿಡಲ್ಲ, ನಿನ್ನ ಹಾಂಗ ನಮಗೇನು ಆಸ್ತಿ ಐತಿ ?

ಪಾರೋತಿ : ನಮ್ಮಪ್ಪನ ಉತ್ತರಕ ಹುಟ್ಟೀನಿ, ಅದಕ್ಕ ನನಗ ಆಸ್ತಿ ಐತಿ. ಯಾರಿಗಿ ಹುಟ್ಟೀದೀರೋ ಹುಚ್ಚರಂಡೇರ್ಯಾ, ನಿಮಗೆಲ್ಲಿ ಆಸ್ತಿ ಬರಬೇಕು ?

ದುರ್ಗಿ : ನಿನ್ನ ನಾಲಿಗಿ ಭಾಳ ಉದ್ದಾಯ್ತುವಾ ಪಾರೋತಿ,....

ಪಾರೋತಿ : ಅಂತೇನ್ಯಾಕ ಅಂತೇನ ! ಅವ್ವ ಬರಲಿ, ಈಕಿ ಕುಬಸದ ಗುಂಡಿ ಬಿಚ್ಚಿ ಬಿದ್ದಕೊಂಡದ್ದ ಹೇಳಲಿಲ್ಲಂದರ ನಾ ಈಕೀ ಕುಬಸದ ಗುಂಟಗಿ ಸಮ ಅಂತ ತಿಳಿ.

ಚಂಪಿ : ಹೇಳ ಹೋಗ್ಯs. ನಿನಗ ಕ್ಷಯರೋಗ ಐತೆಂತ ಮಾವ
ಹೇಳಲಿಲ್ಲಂದರ ನಾ ನಿನ್ನ ತಟ್ಲಿಗಿ ಸವು ಅಂತ ತಿಳಿ.

ಶೀಲಕ್ಕ : ಆಸ್ತಿ ಇದ್ದರ ಎಂಥೆಂಥಾ ರೋಗ ಗುಣಾ ಆಗತಾವ ಬಿಡ್ವs ಚಂಪಿ

ಪಾರೋತಿ : (ಶೀಲಕ್ಕನಿಗೆ) ವುತ್ತ ನೀ ಯಾರು ? ಆಕೀ ಅಕ್ಕ !

(ಹೊರಗಿನಿಂದ 'ಬಾಪ್ಪ ಬಾ' ಎನ್ನುತ್ತ ಗೌಡ್ತಿ ಒಳಗ
ಬರುವಳು. ಇಷ್ಟೊತ್ತಿಗೆ ದುರ್ಗಿ ಧಾನ್ಯ ಕೇರಿ ಬುಟ್ಟಿ ತುಂಬಿ
ದ್ದಾಳೆ. ಚಂಪಿ, ಶೀಲಕ್ಕ ತಂತಮ್ಮ ರೂಮುಗಳಲ್ಲಿ ಮರ
ಯಾಗುವರು. ಹಿಂದಿನಿಂದ ಬೀಗರ ಕಡೆಯ ಆಳು ಬರುವನು.)

ಗೌಡ್ತಿ : ಬಾಪ್ಪ, ಬಾ. ಏ ದುರ್ಗೀ, ಬೀಗರ ಕಡೆಯವರು ಬಂದಾರ,
ಏನಾರ ತಿನ್ನಾಕ ತಗೊಂಬಾ.

(ದುರ್ಗಿ ಒಳಗೆ ಹೋಗುವಳು.)

ಕೂತುಕೊಳ್ಳಪಾ. ಬೀಗರೆಲ್ಲಾ ಆರಾಮದಾರ ?

ಆಳು : ಹೂನ್ರಿ.

ಗೌಡ್ತಿ : ಬಾವೀದೇನೋ ತಕರಾರಿತ್ತಂತಲ್ಲ, ಬಗೀಹರೀತ ?

ಆಳು : ಹೂನ್ರಿ.

ಗೌಡ್ತಿ : ಅದು ಊರಗೌಡರಾಗಿ ಸಣ್ಣ ಸಣ್ಣ ರೈತರಿಗೆಲ್ಲಾ ಅಂಜಿ
ಕುಂತರ ಹೆಂಗ ಹೇಳು. ಗೌಡರಂದರ ಗೌಡರ್ಹಾಂಗಿರಬೇಕಪ್ಪ,
ಖರೆ ಅಂತಿ, ಸುಳ್ಳಂತಿ ?

ಆಳು : ಹೂನ್ರಿ.

(ದುರ್ಗಿ ಬಂದು ಅವನ ಮುಂದೆ ತಿಂಡಿ ಇಡುವಳು. ಆಳು
ಗಬ ಗಬ ತಿನ್ನ ತೊಡಗುವನು. ಗೌಡ್ತಿ ವೀಳ್ಯದೆಲೆ ಹಾಕಿ
ಕೊಳ್ಳುತ್ತ)

ಗೌಡ್ತಿ : ಮತ್ತೇನಪಾ ? ಬೀಗರು ಏನಾದರು ಸುದ್ದಿ ಹೇಳಿ,
ಕಳಿಸ್ಯಾರೇನು ?

ಆಳು ಹೂನ್ರಿ.

ಗೌಡ್ತಿ ಏನು ?

ಆಳು — ವರ ಕನ್ಯಾನ ಒಪ್ಪಿಕೊಂಡಾನ್ರಿ, .. ಆದರ....

ಗೌಡ್ತಿ — ಏನಾದರ ?

ಆಳು — ಅವರ ತಂದೀ ತಾಯಿಯಾನೂ ಒಪ್ಪಿಕೊಂಡಾರ್ರಿ. ಆದರ....

ಗೌಡ್ತಿ — ಹೌಂದ ? ಮತ್ತೇನಾದರ.... ?

ಆಳು — ನಮಗೆಲ್ಲಾರಿಗೂ ಕನ್ಯಾ ಮನಸ್ಸಿಗೆ ಬಂದೈತ್ರಿ, ಆದರ....

ಗೌಡ್ತಿ — ಆದರ ಆದರ.... ಅದೇನ ಹೇಳಬಾರದ ?

ಆಳು — ಆದರ .. ಹೆಹೆಹೆ.... ಆ .. ಈ....

(ಹುಲಿಗೊಂಡ ಹೊರಬಾಗಿಲ ಬಳಿ ನಿಂತು ಒಳಗಿನದನ್ನು ಕೇಳಿಸಿಕೊಳುತ್ತಿದ್ದಾನೆ.)

ಗೌಡ್ತಿ — ಏಯ್ ! ಏನೂ ಆ ಈ ಆ ಈ ಅಂದರ ? ಅದೇನ ಬೊಗಳಬಾರದ ?

ಆಳು — ವರಾ ಒಪ್ಪ್ಯಾನ್ರಿ, ತಂದೀತಾಯೀ ಒಪ್ಪ್ಯಾರ್ರಿ, ನಾವೆಲ್ಲಾ ಒಪ್ಪೀವ್ರಿ, ಆದರ ಇಪ್ಪತ್ತೈದ ಸಾವಿರ ವರದಕ್ಷಿಣೆ ಕೇಳತಾರ್ರಿ.

ಗೌಡ್ತಿ — (ಪಿಚಕ್ಕನೆ ಉಗುಳಿ)
ಇಪ್ಪತ್ತೈದ ಸಾವಿರ ವರದಕ್ಷಿಣೆ ? ಇಪ್ಪತ್ತೈದ ಸಾಕ ? ಇನ್ನ ಹತ್ತ ಬೇಕ ? ಏನಪಾ ಮುವತ್ತೈದ ಕೊಟ್ಟರ ಹೆಂಗ ?

ಆಳು — ಹೋಗಿ ಹೇಳತೇನ್ರಿ.

ಗೌಡ್ತಿ — ಹೋಗೊ್ರ ಕಳ್ಳ ನನ ಮಕ್ಕಳ್ರಾ, ಅದೊಂದ ಮೂಗು, ಅದರಾಗ ಸೇರಿಸೋ ಬೆರಳು—ಎರಡ ಬಿಟ್ಟರ ಏನೈತೋ ಆ ವರನ ಹಂತ್ಯಾಕ ? ಏನೋ ದೊಡ್ಡ ಮನಸ ಮಾಡಿ ಮಗಳ್ನ ಕೊಡೋಣಂದರ, ಅದೇನೋ ಅಂತಾರಲ್ಲ,—ಕರದ ಹೆಣ್ಣ ಕೊಟ್ಟರ ಅಳಿಯಾಗ ಮಲರೋಗ ಬಂತಂತ ! ಏಯ್ ಹೋಗಿ ಹೇಳೊ, ಈ ಜಗತ್ತಿನಾಗ ವರ ನೀನೊಬ್ಬ್ನs ಅಲ್ಲ, ತುಂಬ್ಯಾರಂತ ಹೇಳು. ಹೊರಬೀಳು ...

(ಆಳು ಅವಸರದಿಂದ ಹೊರಡುವನು. ಗೌಡ್ತಿ ತನ್ನ ಪಾಡಿಗೆ ತಾನು ಮಾತಾಡುತ್ತಿದ್ದಾಳೆ. ಆಳು ಅವಸರದಿಂದ ಹೋಗುತ್ತಿದ್ದಾಗ ಹುಲಿಗೊಂಡ ಅವನನ್ನು ಹಿಡಿದು ಜೇಬಿನಿಂದ ಹಣ ತೆಗೆದು ಬಕ್ಷೀಸು ಕೊಟ್ಟು ಕಳಿಸುವನು. ಆಳು ಓಡುತ್ತಾನೆ,

ಗೌಡ್ತಿಯ ಮಾತುಗಳಿಗೆ ಚಂಪಿ, ಶೀಲಿ, ಪಾರೋತಿ ಮೂವರೂ ತಂತಮ್ಮ ಕೋಣೆಗಳಲ್ಲಿ ಪ್ರತಿಕ್ರಿಯೆ ತೋರಿಸುತ್ತಿದ್ದಾರೆ. ಚಂಪಿ ಖುಶಿಪಟ್ಟರೆ ಪಾರೋತಿ ತನ್ನ ಕೋಣೆಯಲ್ಲಿ ಆ ಕಡೆ ಈ ಕಡೆ ಸುತ್ತಾಡಿ ದಿಂಬು ಸೀರೆಗಳನ್ನೆಲ್ಲ ಚೆಲ್ಲಾಪಿಲ್ಲಿ ಎಸೆಯುತ್ತಾಳೆ.)

ಗೌಡ್ತಿ — ಮುನ್ನೂರ ಎಕರೆ ಜಮೀನಂತ ಇವಗ. ನಾ ? ಸಾವಿರ ಎಕರೆ ಜಮೀನದಾರ್ತಿ, ನನಗೆಷ್ಟು ಕೊಬ್ಬ ಇರಬ್ಯಾಡ! ಹಲ್ಕಟ್ಟ ಭಾಡೇರ್ನ ತಂದು.... ಯೋಳ್ಯೋಳ ವರ್ಸ ತಪಸ್ಸ ಮಾಡಿದರ ಇಂಥಾ ಹುಡಿಗಿ ಸಿಗತಿದ್ದಳಽ ಅವಗಽ ? ನಶೀಬ ಬೇಕ ನಶೀಬ!

(ಪಾರೋತಿ ಹಣೆ ಹಣೆ ಚಚ್ಚಿಕೊಳ್ಳುತ್ತ ಹೊರಗೆ ಹೋಗುವಳು. ಗೌಡ್ತಿ ಕೋಪದಿಂದ ಇದ್ದವಳು ಈಗ ಎಚ್ಚತ್ತು 'ಪಾರೋತೀ, ಪಾರೋತೀ', ಎನ್ನುತ್ತ ಬೆನ್ನು ಹತ್ತುತ್ತಾಳೆ. ಅಡಿಗೆ ಮನೆಯಲ್ಲಿದ್ದ ದುರ್ಗಿಯೂ ಅವಳ ಹಿಂದೆ ಹೋಗುತ್ತಾಳೆ. ಅವರು ಹೊರಗೆ ಹೋಗುವಾಗ ಅಲ್ಲೇ ಅಡಗಿ ನಿಂತಿದ್ದ ಹುಲಿಗೊಂಡ ಪಡಸಾಲೆಗೆ ಬರುತ್ತಾನೆ. ಚಂಪಿ ತನ್ನ ಕೋಣೆಯಿಂದ ಬರುತ್ತಾಳೆ. ಶೀಲಿ ತನ್ನ ಕೋಣೆಯಲ್ಲೇ ಇದ್ದು ಇವರ ಮಾತು ಕೇಳಿಸಿಕೊಳ್ಳುತ್ತಾಳೆ. ಚಂಪಿ ಬಂದೊಡನೆ ಹುಲಿಗೊಂಡ ಉತ್ಸಾಹದಿಂದ ಚಂಪಿಯ ಭುಜದ ಮೇಲೆ ಕೈಯಿಡುತ್ತ)

ಹುಲಿಗೊಂಡ — ಸುದ್ದಿ ತಿಳೀತ ?

ಚಂಪಿ — ನನ್ನ ಮುಟ್ಟ ಬ್ಯಾಡ.

ಹುಲಿಗೊಂಡ — ನಿನ್ನ ಸಿಟ್ಟ ಇನ್ನೂ ಆರಿಲ್ಲ ?

ಜಂಪಿ — ಆದು ಆರೋದೂ ಇಲ್ಲ.

ಹುಲಿಗೊಂಡ — ನನ್ನ ತಪ್ಪ ಮರೆಯೋದಿಲ್ಲ ?

ಚಂಪಿ — ನಿನ್ನ ಹೆಂಡತಿ ಬರತಾಳ ಹೊಂಟ್ಹೋಗು.

ಹುಲಿಗೊಂಡ — ಇಂದ ರಾತ್ರಿ ಕುಂದರಿ ಕೊಟ್ಟಿಗ್ಗಿ ಬರತಿ ?

ಚಂಪಿ — ಯಾಕ ?

ಹುಲಿಗೊಂಡ — ಮಾತಾಡೋದೈತಿ.

ಚಂಪಿ ಅದೇನ, ಇಲ್ಲೇ ಹೇಳು.

ಹುಲಿಗೊಂಡ ನಿನ್ನ ಜೋಡಿ ಎರಡ ಮಾತಾಡೋದಕ್ಕೂ ನಾ ನಾಲಾಯಖ್ಖ ಅಂತೀಯೇನು ?

ಚಂಪಿ ಸನ್ನ ಹಾಂಗ ನೋಡಬ್ಯಾಡ.

ಹುಲಿಗೊಂಡ ಹಂಗಾದರ ಬರೋದಿಲ್ಲಾ ?

ಚಂಪಿ (ತುಸು ಹೊತ್ತು ಇವನನ್ನೇ ನೋಡಿ) ಬರತೀನಿ.

(ಶೀಲಿ ಈ ಮಾತು ಕೇಳಿಸಿಕೊಳ್ಳುತ್ತಿದ್ದಂತೆ, ಕತ್ತಲಾಗುತ್ತದೆ.)

# ಅಡ್ಡಮಳೆ

(ರಾತ್ರಿ. ಎಲ್ಲರೂ ಮಲಗಿದ್ದಾರೆ. ಅಡ್ಡಮಳೆಯ ಪೂರ್ವಭಾವಿ ಬಿರುಗಾಳಿ ಬೀಸುತ್ತಿದೆ. ಪಡಸಾಲೆಯಲ್ಲೊಂದು ದೀಪ ಸಣ್ಣದಾಗಿ ಉರಿಯುತ್ತಿದೆ. ಪಾರೋತಿಯ ರೂಮಿನಲ್ಲೂ ಒಂದು ದೀಪ ಉರಿಯುತ್ತಿದೆ. ಆಕೆ ಮಲಗಿದ್ದಾಳೆಂದು ಸ್ಪಷ್ಟ ವಾಗಿ ಕಾಣಿಸುತ್ತದೆ. ಕೊಟ್ಟಿಗೆಯಲ್ಲಿ ಕುದುರೆ ಚಡಪಡಿಸುವ ಸಪ್ಪಳ ಕೇಳಿ ಪಾರೋತಿ ಅರೆ ಎಚ್ಚರಗೊಂಡು ಹೇಳುತ್ತಾಳೆ.)

ಪಾರೋತಿ : ಏ ದುರ್ಗೀ, ಕುದರಿ ಹಗ್ಗ ಹರಕೊಂಡೈತಿ, ಕಟ್ಟಿ ಹಾಕಬಾರ ದೇನೇ ಅದನ್ನ ? ಇಷ್ಟೊತ್ತಿನಾಗ ಇವ ಎಲ್ಲಿ ಹೋದ್ನೊ ?

(ಎನ್ನುತ್ತ ಮಗ್ಗಲು ಬದಲಿಸಿ ಮಲಗುತ್ತಾಳೆ. ಪಡಸಾಲೆಯಲ್ಲಿ ಮಲಗಿದ್ದ ದುರ್ಗಿ ಎದ್ದು, ದೀಪ ದೊಡ್ಡದು ಮಾಡಿ, ಬಾಗಿಲ ಕಡೆ ಹೊರಡುತ್ತಾಳೆ. ಬಾಗಿಲು ಚಿಲಕ ಹಾಕಿಲ್ಲದ್ದನ್ನು ಗಮನಿಸುವಳು.)

ದುರ್ಗಿ : ಅಯ್ ಶಿವನ ! ಬಾಗಲ ಚಿಲಕಾ ಯಾರೂ ಹಾಕೇ ಇಲ್ಲಲ್ಲ, ಎಲ್ಲಾರಿಗು ಆದೆಂಥಾ ಮರವ್ವೋ ಅಂತೀನಿ ! ಅಡಮಳಿ ಸುರುವಾತು.

(ಬಾಗಿಲು ತೆರೆದು ಹೊರಗೆ ನೋಡುವಳು)

ಕುದರಿ ಒದ್ದಾಡಕ ಹತ್ತೇತಿ, ಹೊರಗ ಹೋದೇನಂದರ ಈ ಮಳಿ ಬ್ಯಾರಿ. ಎಳಿ ಮಾವಿನ ಗಿಡ ಇದ್ಸ ಸಲ ಹೂ ಬಿಟ್ಟಿತ್ತು, ಹಾಟ್ಯಾನ ಮಳಿ ಈಗ್ಯ ಬರಬೇಕ ? ಮಳಿ, ಗಾಳಿ ಅಬ್ಬರ ನೋಡಿದರ ಒಂದ ಹೂ ಉಳಿಯೋ ಹಾಂಗ ಕಾಣಸೂದಿಲ್ಲ. ಮೈತುಂಬ ಹೂ ಬಿಟ್ಟಕೊಂಡ ಗುಂಡಗ ಎಂಥಾ ಚಂದ ಕಾಣತಿತ್ತು ! ದೇವರಾಟ !

(ಬಾಗಿಲ ಚಿಲಕ ಹಾಕುವಳು. ಮತ್ತೆ ಹಾಸಿಗೆಗೆ ಹೋಗಿ ದೀಪ ಸಣ್ಣದು ಮಾಡಿ "ಎಪ್ಪಾ ಶಿವನಿಂಗ ಸ್ವಾಮೀ" ಎನ್ನುತ್ತ

ಮಲಗುವಳು. ತುಸು ಸಮಯಾದ ಬಳಿಕ ಚಂಪಿ ತನ್ನ ರೂಮಿ ನಿಂದ ಹೊರಡುವಳು. ಬಾಗಿಲ ಬಳಿ ಬರುತ್ತಲೂ ಹೊರಗಡೆ ಯಿಂದ ಯಾರೋ ಬಾಗಿಲು ತೆರೆಯಲು ಪ್ರಯತ್ನಿಸುತ್ತಿರುವುದು ಗೊತ್ತಾಗುತ್ತದೆ. ತುಸು ಸಮಯ ಯೋಚಿಸಿ ಬಾಗಿಲು ತೆರೆಯುವಳು. ಹೊರಗಡೆಯಿಂದ ಕೂದಲು ಚೆದುರಿದ, ಒದ್ದೆ ಮೈಯ ಶೀಲಿ ಒಳಕ್ಕೆ ಬಂದು ನಿಂತದ್ದು ಮಂಡ ಪ್ರಕಾಶದಲ್ಲಿ ಕಾಣಿಸುತ್ತದೆ. ಶೀಲಿ ಗೆದ್ದವಳಂತೆ ವ್ಯಂಗ್ಯವಾಗಿ ಚಂಪಿಯಕಡೆ ನೋಡುತ್ತ ನಿಲ್ಲುತ್ತಾಳೆ. ಚಂಪಿ ವ್ಯಗ್ರಳಾಗಿ ಶೀಲಿಯ ಕೂದಲಿಗೆ ಕೈ ಹಾಕಿ ಎಳೆಯುತ್ತಾಳೆ.)

ಚಂಪಿ — ಖರೆ ಹೇಳ ಎಲ್ಲಿಗಿ ಹೋಗಿದ್ದಿ ?

ಶೀಲಕ್ಕ — ಕುದರೀ ಕೊಟ್ಟಿಗ್ಗಿ.

(ಚಂಪಿ ಅವಳನ್ನು ಸೀಳುವಂತೆ ಯುದ್ಧಕ್ಕೆ ಅಣಿಯಾಗುವಷ್ಟ ರಲ್ಲಿ ಗುಡುಗು, ಸಿಡಿಲು ಹೊಡೆದ ಸದ್ದು ಕೇಳಿಸುತ್ತದೆ. ಅದೇ ಕ್ಷಣ ಪಾರೋತಿ "ಎವ್ವಾ ಎವ್ವಾ" ಎಂದು ಕಿರುಚುತ್ತಾಳೆ. ತಕ್ಷಣ ಇಬ್ಬರೂ ಜಗಳ ಬಿಟ್ಟು ಅಲ್ಲಲ್ಲೆ ಅಡಗಿ ಕೂರುತ್ತಾರೆ. ಕೊಟ್ಟಿಗೆಯಲ್ಲಿ ಹುಲಿಗೊಂಡ ಕುದುರೆ ಕಟೆಯುವ, ಅದೂ ಒದ್ದಾಡುವ ಸಪ್ಪಳ ಕೇಳಿಸುತ್ತದೆ. ಚಂಪಿ ಶೀಲಿಯರಿಬ್ಬರೂ ಪರಸ್ಪರ ಖೆಕ್ಕರಿಸಿ ನೋಡುತ್ತಿದ್ದಾಗ ಪಾರೋತಿ ಮತ್ತೆ ಒದರುತ್ತಾಳೆ.)

ಪಾರೋತಿ — ಎವ್ವಾ ! ಎವ್ವಾ !

ಗೌಡ್ತಿ — (ಎಚ್ಚತ್ತು) ಪಾರೋತಿ, ಪಾರೋತಿ....

(ಗೌಡ್ತಿ ಎದ್ದು ಪಾರೋತಿಯ ರೂಮಿಗೆ ಬರುತ್ತಾಳೆ.)

ಪಾರೋತಿ, ಏ ಪಾರೋತಿ....

(ಪಾರೋತಿ ಎಚ್ಚತ್ತು ಕೂರುತ್ತಾಳೆ.)

ಗೌಡ್ತಿ — ಕನಸ ಕಂಡೇನ ಮಗಳ ? ಹೆದರಿದಿ ?

ಪಾರೋತಿ — ಕನಸಿನಾಗ ಕುದರಿ ಬಂದಿತ್ತs ಎವ್ವಾ! ಉಕ್ಕಿನಂಥಾ ಕರೀ ಮೈ, ಚೂರಿಯಂಥಾ ಕಣ್ಣಾ—ಕೆಂಡದಂಥಾ ಮೂಗಿನ ಹೊಳ್ಳಿ ಫಳಾ

ಥಳಾ ಹೊಳೀತಿತ್ತು! ಬೆಂಕಿ ಹತ್ತಿಧಾಂಗ ಕತ್ತಿನ ತುಂಬ ಕೂದಲಿದ್ದುವು! ಕುಣಕೋತ ಕುಣಕೋತ ನಮ್ಮ ಮನಿ ಹೊಕ್ಕ್ಯಾಂಗಾತು! ಅಡಕಲ ಗಡಿಗಿ ಬಿದ್ದು, ಸಾಮಾನೆಲ್ಲಾ ಚೆಲ್ಲಾಪಿಲ್ಲಿ ಆಗಿ ನಮ್ಮ ಮನೀ ನಡುಗಂಬ ಕುಸಿಧಾಂಗಾತು. ಅಯ್ ಶಿವನs ಕುದುರೀ ಕುದುರೀ ಅನ್ನೂದರಾಗ ಹೈ ಅಂತ ಮುಂಗಾಲೆತ್ತಿ ಮ್ಯಾಲ ಆಕಾಸಕ, ಕೆಳಗ ನೆಲಕ್ಕ ಏಕಾಏಕ ಆಗಿ ನನ್ನ ಎದೀಮ್ಯಾಲ ಹಾರಿಧಾಂಗಾಯ್ತು!

ಗೌಡ್ತಿ : ಥೀ ಹುಚ್ಚೀ ಏನೇನೋ ಕನಸ ಕಾಣ್ತಿ! ಮಲಗು ಮಲಗು.

ಪಾರೋತಿ : ಎವ್ವಾ ನೀ ಹೋಗಬ್ಯಾಡಬೇ, ನನಗ ಅಂಜಿಕಿ ಬರತೈತಿ.

ಗೌಡ್ತಿ : ಹುಲಿಗೊಂಡ ಎಲ್ಲಿಗಿ ಹೋಗ್ಯಾನ?

ಪಾರೋತಿ : ಅವ ಎಲ್ಲಿ ಹೋಗತಾನೋ, ಯಾವಾಗ ಹೋಗತಾನೊ! ಯಾವಾಗ ಬರತಾನೋ—ನನಗ ಒಂದೂ ಹೇಳಾಂಗಿಲ್ಲ. ನಾ ನೋಡಿದಾಗೆಲ್ಲಾ ಹಾಸಿಗಿ ಖಾಲೀನs ಇರತೈತಿ.

ಗೌಡ್ತಿ : ಇಂಥಾ ವ್ಯಾಳ್ಯಾದಾಗ ಎಲ್ಲಿ ಹೋಗಿದ್ದಾನಾದೀತು! ಕುದರೀ ಕಟ್ಟ್ಯಾಕ್ಹತ್ಯಾನಂತ ಕಾಣತೈತಿ, ನಾಳಿ ಕೇಳೋಣು, ಮಲಕೊ.

(ಗೌಡ್ತಿ ಯೋಚನಾಮಗ್ನಳಾಗಿ ಹೊರಡುವಳು.)

# ಕುದುರೆ ಸವಾರಿ

(ಹೊರಬಾಗಿಲಲ್ಲಿ ಹಟದಿಂದ ಪಾರೋತಿ ಕೂತಿದ್ದಾಳೆ. ಹೊರಗೆ ಬರುತ್ತಿರುವವರನ್ನೇ ಕಾಯುತ್ತ ಶೀಲಕ್ಕ ತನ್ನ ರೂಮಿನ ಮುಂದಿನ ಅಟ್ಟದ ಮೇಲೆ ಅಡ್ಡಾತ್ತಿದ್ದಾಳೆ. ಪಡಸಾಲೆಯಲ್ಲಿ ದುರ್ಗಿ ಪಾರೋತಿಯನ್ನು ಹ್ಯಾಗೆ ಸಮಾಧಾನ ಮಾಡಬೇಕೆಂದು ತೋಚದೆ ಗೊಂದಲದಲ್ಲಿದ್ದಾಳೆ.)

ದುರ್ಗಿ : ಒಳಗ ಬಾ ಪಾರೋತಿ,....

ಪಾರೋತಿ : ನಾ ಬರೂದಿಲ್ಲ.

ದುರ್ಗಿ : ಚಂಪಿ ಬರಲಿ, ಬಂದ ಮ್ಯಾಲ ಕೇಳೂಣಂತ.

ಪಾರೋತಿ : ಆಕಿ ಬರೂತನಕ ನಾ ಇಲ್ಲೇ ಕೂರುವಾಕಿ.

ದುರ್ಗಿ : ಎಳೀ ಮಕ್ಕಳ್ಹಾಂಗ ಹಟ ಹಿಡೀಬ್ಯಾಡ. ಇಷ್ಟ್ಯಾಗಿ ಶೀಲಕ್ಕ ಹೇಳಿದ್ದ ಖರೇ ಅಂತೇನು ?

ಶೀಲಕ್ಕ : ನನಗ ಸುಳ್ಳೀ ಪಳ್ಳೀ ಅಂದರ ಸಿಟ್ಟ ಬರತೈತೇ ದುರ್ಗೀ,

ದುರ್ಗಿ : ನೀ ಬಿಡವ್ವಾ, ಚಾಡಿ ಹೇಳದಿದ್ದರ ಉಂಡ ಕೂಳ ಹೊಟ್ಟೆಗೇ ಹತ್ತೋದಿಲ್ಲ, ನಿನಗ. ಚಾಡೀ ಹೇಳಾಕ ಏನಾರ ಸಿಕ್ಕೀತೋ ಇಲ್ಲೋ ಅಂತ ಹದ್ದಿನ್ಹಾಂಗ ಕಾಯತಿರತಿ. ಒಂದ ಸಿಕ್ಕರ ಸಾಕು, ಒಂಬತ್ತ ಮಾಡಿ ಹೇಳ್ತಿ. ಚಂಪಕ್ಕನ ಕಂಡರ ಅರಗಳಿಗೆ ಸೇರಾಣಿಲ್ಲ; ವೈರೀನ ಕಂಡ್ಹಾಂಗಾಡ್ತಿ. ನಿನಗ ಅಂಥಾದ್ದೇನ ಮಾಡ್ಯಾಳಾಕಿ ?

ಶೀಲಕ್ಕ : ಒಡದ ಕುರುವಿನಂಥಾ ನಿನ್ನ ಬಾಯಿ ತಗೀಬ್ಯಾಡ ! ಬೆಳದ ಹುಡಿಗಿ ಅಕ್ಕನ ಗಂಡನ ಜೋಡಿ ಕುದರೀ ಹತ್ತಿ ಓಡ್ಯಾಡಸ್ತಾಳಂದರ.... ಇದ ಸಣ್ಣ ಮಾತ ?

ದುರ್ಗಿ  ಸಣ್ಣ ಹುಡಿಗಿ, ಆಟಕ್ಕ ಹತ್ತಿ ಓಡ್ಯಾಡಿಸಿದರ ಏನಾಯ್ತು ? ಯಾಕ, ಮೊನ್ನಿ ನೀ ಹತ್ತತೇನಂತ ಗಂಟ ಬಿದ್ದಿರಲಿಲ್ಲಾ ? ಮಾವಗ ?

ಶೀಲಕ್ಕ  ಆದರ ನಾ ಕುದರೀ ಹತ್ತಲಿಲ್ಲ.

ದುರ್ಗಿ  ಯಾಕಂದರ ಮಾವ ಹತ್ತಸಲಿಲ್ಲ.

ಪಾರೋತಿ  ಸರ್ಪ ಚಿನ್ನದ ಕೊಪ್ಪರಿಗಿ ಕಾದ್ಹಾಂಗ ನನ್ನ ಗಂಡನ್ನ ಕಾಯಕೊತಾ ಕುಂದರ ಬೇಕಾಗೇತೇ ದುರ್ಗಿ, ಏನ ಹೇಳಲಿ ನನ್ನ ಬಾಳುವೆ ! ನಾ ಎಂದ ಸಾಯತೇನೋ, ಎಂದ ಕೊಪ್ಪರಿಗಿ ಸಿಕ್ಕೇತೋ ಅಂತ ಬೆನ್ನಿಗಿ ಬಿದ್ದವರೆಲ್ಲಾ ಕಾಯಾಕ ಹತ್ತ್ಯಾರ ! ಈ ನನ್ನ ಸವತಿ ಶೀಲಿ ಏನ ಕಮ್ಮಿ ?

ಶೀಲಕ್ಕ  ಉಪಕಾರ ಮಾಡೋ ದಿನ ಅಲ್ಲಿವು. ಏನೋ ಅಕ್ಕನ ಬಾಳುವೆ ಸುದ್ದಾಗಲೆಂತ ಹೇಳಿದರ ನನಗs ತಿರಿಗಿ ಬೀಳ್ತೀಯಲ್ಲs !

ಪಾರೋತಿ  ಮೆದ್ಯಾಗ ಹುಟ್ಟಿದ್ದುವೆಲ್ಲಾ ಕಸಬರಿಗೀ !

ದುರ್ಗಿ  ಆಯ್ತಲ್ಲ ಪಾರೋತಿ, ಇನ್ನ ಒಳಗ ಬಾ, ನಿಮ್ಮಪ್ಪ ಬಂದ ಮ್ಯಾಲ ಎಲ್ಲಾ ವಿಚಾರಿಸಿಕೊಳ್ತಾಳ !

ಪಾರೋತಿ  ನಾ ಬರಾಣೆಲ್ಲಂದರ ...

ಶೀಲಕ್ಕ  ಚಂಪಿ ಬಂದ್ಲು !

(ಪಾರೋತಿ ಎದ್ದು ನಿಲ್ಲುವಳು. ಶೀಲಕ್ಕ ಮೋಜು ನೋಡುತ್ತ ದಕ್ಕಾಗಿ ಕೆಳಗಿಳಿದು ಬರುವಳು. ದುರ್ಗಿಯು ಆತಂಕ ಜಾಸ್ತಿ ಯಾಗಿದೆ. ಕೂದಲು ಕೆದರಿದ ಚಂಪಿ ಒಳಬರುವಳು. ಪಾರೋತಿ ದಾರಿಗಡ್ಡ ಕಟ್ಟಿ ನಿಲ್ಲುವಳು.)

ಪಾರೋತಿ  ಯಾಕs ಎಲ್ಲಿಗಿ ಹೋಗಿದ್ದಿ ?

ಚಂಪಿ  ತೋಟಕ್ಕ ಹೋಗಿದ್ದೆ.

ಪಾರೋತಿ  ಏನ ಮಾಡಾಕ ಹೋಗಿದ್ದೆ ? ಕೂದಲೆಲ್ಲಾ ಚೆದರಿ ಹೋಗೇತಿ!

ಚಂಪಿ  ಮಾವಗ ಊಟಾ ಕೊಡಾಕ ಹೋಗಿದ್ದೆ.

ಪಾರೋತಿ  ಕುದರೀ ಲದ್ದೀ ಹಾಂಗ ನಾರತಿ....

ಚಂಪಿ  ನಿನಗ ರೋಗ ಐತಲ್ಲಾ, ಏನೇನೋ ನಾರತೈತಿ !

ಪಾರೋತಿ  ಹುಚ್ಚರಂಡೀ, ಮಾವನ ಜೋಡೀ ಕುದರೀ ಹತ್ತಿದ್ಹಂಗ....

(ಎನ್ನುತ್ತ ಚಂಪಿಯ ಕೂದಲು ಹಿಡಿದು ಜಗ್ಗುವಳು. ಬಿಡಿಸಿಕೊಳ್ಳುವುದಕ್ಕೆ ದುರ್ಗಿ ಚಂಪಿಯ ಸಹಾಯಕ್ಕೆ ಬಂದರೂ ಉಪಯೋಗವಾಗುವುದಿಲ್ಲ. ಅಷ್ಟರಲ್ಲಿ ಹುಲಿಗೊಂಡ ಬರುವನು. ಪಾರೋತಿ ಚಂಪಿಯನ್ನು ಬಿಟ್ಟು ಅವನನ್ನು ಅಡ್ಡಗಟ್ಟುವಳು. ಚಂಪಿ ತನ್ನ ರೂಮಿಗೆ ಹೋಗುವಳು.)

ಪಾರೋತಿ : ಚಂಪೀನ ಕುದರೀಮ್ಯಾಲ ಹತ್ತಿಸಿಕೊಂಡ ಹೋಗಿದೆಂತ, ಹೌಂದ ?

ಹುಲಿಗೊಂಡ : (ನಿರ್ಲಕ್ಷ್ಯದಿಂದ) ನನ್ನ ಪಾಡಿಗಿ ನನ್ನ ಬಿಡತಿ ?

ಪಾರೋತಿ ಯಾಕ ಬಿಡಲಿ ? ಈ ಗೌಡಿಕಿ, ಈ ಶ್ರೀಮಂತಿಕಿ ನಿನಗ ಯಾರಿಂದಾಯ್ತು ? ಒಂದೀಟಾದರೂ ನನ್ನ ದಾದ, ದರಕಾರ ಮಾಡತಿ ? ಇವ ಚಂಪೀನ ಕುದರೀ ಹತ್ತಿಸಿಕೊಂಡ ಓಡ್ಯಾಡಸ್ತಾನಂತ; ನಾ? 'ಅವ್ ನನ್ನ ಗಂಡ, ಏನ ಸರದಾರ !' —ಅನ್ನಬೇಕಂತ !

ಹುಲಿಗೊಂಡ ನನಗೀಗ ಏನ ಮಾಡಂದಿ ?

ಪಾರೋತಿ ನನಗ ಇಂಥಾದ್ದೆಲ್ಲಾ ಸರಿಬರಾಣಿಲ್ಲಾ - ಅಂದೆ.

ಹುಲಿಗೊಂಡ ಆಯ್ತು.

ಪಾರೋತಿ ಆದರ ಆಕೀನ್ಯಾಕ ಕುದರೀ ಹತ್ತಿಸಿಕೊಂಡ ಹೋಗಿದ್ದಿ ?

ಹುಲಿಗೊಂಡ ಹೋದರೇನಾಯ್ತೀಗ ?

ಪಾರೋತಿ ಇನ್ನೇನಾಗಬೇಕು ? ಮದುವಿಗಿ ಬಂದ ಹೆಂಗಸನ್ನ ಹಿಂಗ ಜೋಡೀ ಜೋಡೀ ಕರಕೊಂಡ ಅಡ್ಡಾಡಿದರ ಮಂದಿ ಏನಂದಾರಂತ ವಿಚಾರ ಬ್ಯಾಡಾ ? ನೋಡ ದುರ್ಗೀ, ಹೆಂಗ ಮಾತಾಡತಾನು ?

ದುರ್ಗಿ ಹುಲಿಗೊಂಡಾ, ಚಂಪಿ ಹುಡುಗಾಟಕ್ಕಂದರ ನೀ ಖರೆ ಖರೇನ್ನ ಕುದರೀ ಹತ್ತಿಸಿಕೊಂಡ ಹೋಗೋದಾ ? ಬ್ಯಾಡಂತ ಬುದ್ಧೀರೀತಿ ಹೇಳಿ ಕಳಸಬೇಕಪ.

ಪಾರೋತಿ ಎತ್ತ ಹೋದರೂ ಅದೊಂದ ಕುದರಿ ಆಗೇತಿ. ಅವ್ವ ಬರಲಿ, ಇಂದ್ನ ಆದನ್ನ ಸಂತಿಗಿ ಹೊಡೀದಿದ್ದರ ನನ್ನ ಹೆಸರ ಪಾರೋತೀನ್ನ ಅಲ್ಲ !

ಹುಲಿಗೊಂಡ ಈಗೇನು ? —ಮನೀ ಬಿಟ್ಟು ಹೋಗಂದಿ ?

(ಈ ಮಾತು ಕೇಳಿ ಪಾರೋತಿಯ ಆರ್ಭಟ ನಿಲ್ಲುತ್ತದೆ. ಜಂಪಿ ತನ್ನ ರೂಮಿನಲ್ಲಿ ನಿಂತುಕೊಂಡು ಈ ಮಾತು ಕೇಳುತ್ತಾಳೆ.)

ನೀ ಏನೊ ಅಂದುಕೊಂಡಿದ್ದೀಯಾದೀತು: ನಿನ್ನ ಆಸ್ತಿಗಾಗಿ, ನಿನ್ನ ಗೌಡಿಕಗಾಗಿ ನಾ ಇಲ್ಲಿ ಇದ್ದೀನಿ—ಅಂತ. ನಂದು ಅಂಬೋದು ಈ ಮನ್ಯಾಗಿರೋದು ಒಂದs ಒಂದು. ಆದೇನ ಹೇಳ್ಲಿ?–ಹೆಣ್ಣ ಕೇಳಾಕ ಬಂದಾಗ ಹಾಕ್ಕೊಂಡು ಬಂದಿದ್ನಲ್ಲಾ, —ಆ ಅಂಗಿ. ಕುದರೀ ಪಳಗಿಸೋವಾಗ ಅಲ್ಲಲ್ಲಿ ಹರದೈತಿ ಖರೆ,—ಅದನ್ನಿನ್ನs ಹಾಂಗs ಇಟ್ಟೇನಿ. ಬೇಕಾದಾಗ ನಾ ಅಂಗಿ ಬದಲ ಮಾಡಿ ಹೋಗಬಲ್ಲೆ. ಮತ್ತ ಹೋಗೋವಾಗ ನನ್ನ ಕರುಳೇನೂ ಚುರ್ ಅನ್ನೋದಿಲ್ಲ,– ನಿನ್ನ ಕಣ್ಣೀರ ಕಂಡರೂ....

# ಮನೆತನದ ಮಾನ

(ರಾತ್ರಿ. ಪಾರೋತಿ ತನ್ನ ರೂಮಿನಲ್ಲಿ ಮಲಗಿದ್ದಾಳೆ. ಚಂಪಿ ತನ್ನ ರೂಮಿನಲ್ಲಿ ಶೃಂಗಾರಗೊಳ್ಳುತ್ತಿದ್ದಾಳೆ. ಶೀಲಿಯೂ ಅಷ್ಟಿಷ್ಟು ಶೃಂಗಾರಗೊಂಡು ತನ್ನ ರೂಮಿನಿಂದ ಮೆಲ್ಲಗೆ ಕೆಳ ಬಂದು ಚಂಪಿಯ ರೂಮಿನ ಹೊರಬದಿಯಲ್ಲಿ ನಿಲ್ಲುತ್ತಾಳೆ.)

ಪಾರೋತಿ    ದುರ್ಗೀ ಇವ ಎಲ್ಲಿ ಹೋಗ್ಯಾನಂತ ನಿನಗೇನಾರ ಗೊತ್ತೈತೇನ್ವ ?

ದುರ್ಗಿ : (ಒಳಗಿನಿಂದ) ಇಲ್ಲ್ವ ಎವ್ವಾ. ಯಾಕ್ವ? ನಿನಗೇನೂ ಹೇಳಿಲ್ಲೇನ?

ಪಾರೋತಿ : ನನ್ನ ಲೆಕ್ಕದಾಗ ಇಟ್ಟಿದ್ದರಲ್ಲೇನು ? ನೋಡಿದಾಗೊಮ್ಮಿ ನನ್ನ ಹೆಸರ ಸೈತ ಮರತವರ್ಹಾಂಗ ಮಾಡತಾನ.

ದುರ್ಗಿ : (ಒಳಗಿನಿಂದಲೇ) ಊರ ಮಂದಿ ಉಂಡಮಲಗ್ಯಾರಲ್ಲ್ವ ಎವ್ವಾ, ಎಲ್ಲಿ ಹೋಗಿದ್ದಾನು ?

ಪಾರೋತಿ : ಯಾ ಕಾಡಿನಾಗ ಕುದರೀ ಹತ್ತಿಕೊಂಡ ಅಡ್ಡ್ಯಾಡತಾನೊ !

ಶೀಲಿ : (ಪಾರೋತಿಗೆ ಕೇಳಿಸುವಂತೆ)
ನಿನಗೇನಾರ ಮಾವ ಹೇಳ್ಯಾನೇನ್ವ ಚಂಪಿ?

ಚಂಪಿ : (ಜೋರಿನಿಂದ) ನನಗ್ಯಾಕ ಹೇಳ್ತಾನ ?

ಶೀಲಕ್ಕ : ದಿನಾ ತೋಟಕ್ಕ ಊಟಾ ಒಯ್ತೀಯಲ್ಲ, ಅಲ್ಲಿ ಹೇಳ್ಯಾನೇನು ? —ಅಂದೆ.

ಚಂಪಿ : ದೀಡೀ ಮಾತಾಡಿದರ ನಾಲಿಗಿ ಕೀಳತೀನಿ.

ಶೀಲಕ್ಕ : ಇಲ್ಲಂದರ ಇಲ್ಲಂತ ಹೇಳಲ್ಲ. ಅದಕ್ಯಾಕಷ್ಟು ಸಿಟ್ಟು ಮಾಡ್ತಿ ? ಏನೋ ಆಗಾಗ ಅವನ ಕುದರೀ ಹತ್ತುತೀ, ಸಣ್ಣ ಸೊಸೀ ಅಂತ ಅವಗೂ ನಿನ್ನ ಮ್ಯಾಲ ಮಾಯೇ ಭಾಳ ಐತಿ, ನಿನಗಾದರೂ ಹೇಳಿದ್ದಾನು, ಅಂತ ಅಂದಕೊಂಡ್ನೆವಾ.

ಚಂಪಿ : (ಇವಳೂ ಅದೇ ವ್ಯಂಗ್ಯದಿಂದ)
ನನಗ ಎಷ್ಟಂದರೂ ಕುದರೀ ಬೆನ್ನ ಗೊತ್ತವಾ. ನೀ ಅವನ

ಲದ್ದೀ ಸೈತ ಕಂಡಾಕಿ. ಯಾಕಂದರ ನಾಕ್ನೆದ ಬರೆ ಒದಿಸಿ ಕೊಂಡೀದಿ ನೋಡು.

(ಶೀಲಿಗೆ ಇದರಿಂದ ನೋವಾಗುತ್ತದೆ. ಇಲ್ಲೀತನಕ ಪಾರೋತಿಗೂ ಕೇಳಿಸುವಂತೆ ಮಾತಾಡುತ್ತಿದ್ದ ಚಂಪಿ ಈಗ ಮೆಲ್ಲಗೆ ಶೀಲಿಗೆ ಮಾತ್ರ ಕೇಳಿಸುವಂತೆ)

ಸಾಕ ? ಇನ್ನಷ್ಟ ಹೇಳಲಾ ?

ಶೀಲಕ್ಕ ಥೂ ಹಲ್ಕಟ್ಟ ರಂಡೆ !

ಪಾರೋತಿ ಶೀಲೀ, ಕೋಮಾಲಿ ಮತ್ತ ಓಡಿಬಂದಾಳಂತ, ಖರೇ ಏನ ?

ಶೀಲಕ್ಕ ಅದೇನೋ ನನಗ್ಗೊತ್ತಿಲ್ಲವಾ.

ಚಂಪಿ (ಮೆಲ್ಲಗೆ) ಗೊತ್ತಿಲ್ಲ್ಯಾಕಂತಿ ? ಮಧ್ಯಾಹ್ನದಾಗ ಭೇಟ್ಯಾಗಿದ್ದೀ, (ಜೋರಿನಿಂದ) ಹೇಳ ಶೀಲಕ್ಕಾ, ಕೊಮಾಲಿ ಮಾಡೋದನ್ನೆಲ್ಲಾ ಕದ್ದ ಕದ್ದ ನೋಡತಾ ಬೆರಳ ಸೀಪತಿ, ಹೇಳಲ್ಲ.

ದುರ್ಗಿ ಆಕೀ ಸುದ್ದಿ ಏನಂತ ಮಾತಾಡ್ತೀರಿ, ನಿಮ್ಮವ್ವ ಬರೋ ಯಾಳೇ ಆತು, ಇನ್ನ ಮಲಗಬಾರದ ?

ಪಾರೋತಿ ಕದ್ದ ಕದ್ದ ಏನ ನೋಡತಾಳು ?

(ಶೀಲಿಗೆ ಆತಂಕವಾಗುತ್ತದೆ. ಚಂಪಿಯ ಬಾಯಿ ಹೇಗೆ ನಿಲ್ಲಿಸಬೇಕೆಂದು ತಿಳಿಯದೆ ಒದ್ದಾಡುತ್ತಾಳೆ.)

ಚಂಪಿ ಅದ್ಯ ಕೊಮಾಲಿ ಮದ್ಯಾಹ್ನ ಷಣೀಗಿ ಬಂದು ಶೀಲಕ್ಕಗ ಎಲ್ಲಾ ಕತಿ ಮಾಡಿ ಹೇಳಿ ಹೋಗ್ಯಾಳ.

ಪಾರೋತಿ ಹೌಂದೇನ್ಯ ಶೀಲಿ ? ಮದ್ಯಾಹ್ನ ಕೊಮಾಲಿ ಬಂದಿದ್ದ

ಶೀಲಕ್ಕ ಹೌಂದು.

ಪಾರೋತಿ ಮತ್ತ ನನಗೇನೂ ಗೊತ್ತಿಲ್ಲಂದಿ ?

ದುರ್ಗಿ ತಂಪೊತ್ತಿನಾಗ ಇದೇನ ಸುದ್ದೀ ಹೇಳತೀಯೆ ಚಂಪಕ್ಕ ?

ಚಂಪಿ ಎಷ್ಟ ಮಜಾ ಐತಿ ಕತಿ ಅದು ! ಕೊಮಾಲಿ ಗಂಡನ ಜೋಡಿ ಮಲಗಿದ್ದಳಂತ. ಗಂಡಗ ನಿದ್ದಿ ಹತ್ತಿತ್ತಂತ. ಅಷ್ಟರಾಗ ಗಲ್ಲದ ಮ್ಯಾಲ ಹೂ ಬಿತ್ತಂತ. ಅವ್ ಇದೇನ ?, —ಅಂತ

| | |
|---|---|
| | ನೋಡತಾಳ: ನಮ್ಮೂರ ಹುಡುಗೋರೆಲ್ಲಾ ಕಿಡಿಕ್ಯಾಗ ನಿಂತಾರಲ್ಲ! ಈಕಿಗೂ ಮನಸ ತಡ್ಯಾಕಾಗದs ಬಂದಳಂತ. ಮತ್ತೇನ ಕೇಳ್ತಿ ? — ಹುಡುಗೋರೆಲ್ಲಾ ಈಕೀನ್ನ ಎತ್ತಿಕೊಂಡ ಕಾಡಿಗಿ ಹೋದರಂತ. ಆಮ್ಯಾಲ ಕಾಡಿನಾಗೇನ ಮಜಾ ಅಂತೀ....ಮುಂದಿಂದ ನೀ ಹೇಳs ಶೀಲಕ್ಕಾ ... |
| ದುರ್ಗಿ | ಏನ ಕೇಳ್ತಿ ಮಲಕ್ಕೊಳ್ಳಾ ಎವ್ವಾ. ಮನೇತನಸ್ಥ ಹುಡಿಗೇರು ಮಾತಾಡೋ ಮಾತs ಇವೆಲ್ಲಾ ? |
| ಪಾರೋತಿ | ಇದೆಲ್ಲಾ ನಿನಗ್ಹ್ಯಾಂಗ ತಿಳೀತs ಚಂಪಿ ? |
| ಚಂಪಿ | ಶೀಲಕ್ಕ ಹೇಳಿದ್ಲು. ಅಲ್ಲೇನs ಶೀಲಕ್ಕಾ ? |
| ಪಾರೋತಿ | ಶೀಲೀ. |
| ಶೀಲಕ್ಕ | ಎಲ್ಲಾ ಸುಳ್ಳು. ಏನೇನೋ ಹುಟ್ಟಿಸಿಕೊಂಡ ಹೇಳತಾಳ. |
| ಪಾರೋತಿ | ಥೂ ರಂಡೇರ್‍ಯಾ! ನಿಮ್ಮ ರಗತದ ಗುಣ ಎಲ್ಲಿ ಹೋದೀತ ಹೇಳು. ಅವ್ವ ಬರಲಿಲ್ಲೇನs ಇನ್ನೂ ?.... |
| ದುರ್ಗಿ | ನಿನ್ನ ಚಿಂತಿ ನಿನಗs ಸಾವಿರದಾವ, ಮತ್ಹ್ಯಾಂದ ಯಾಕ ಹಚ್ಚಿ ಕೊಳ್ತಿ ? ಏನಿದ್ದರೂ ನಿಮ್ಮವ್ವ ನೋಡಿಕೊಳ್ತಾಳ ; ನೀ ಸುಮ್ಮನ ಮಲಗು. ಬೆಳೆದ ದೊಡ್ಡವರಾದರೂ ಇನ್ನs ಹುಡಗಾಟಕಿ ಬಿಟ್ಟೇ ಇಲ್ಲ, ಇಬ್ಬರೂ. ಎಂದು ಸಮ ಬುದ್ಧಿ ಬರತೈತೋ, ದೇವರs ಬಲ್ಲ. |
| | (ಶೀಲಿ ಮಲಗುವುದಕ್ಕೆ ತನ್ನ ರೂಮಿಗೆ ಹೊರಡುವಳು. ದುರ್ಗಿ ಬಂದು ಪಾರೋತಿಗೆ ಔಷಧ ಕುಡಿಸಿ, ದೀಪ ಆರಿಸಿ ಮಲಗುವು ದಕ್ಕೆ ಹೋಗುವಳು. ಪಾರೋತಿ ಹೊರಳಿ ಮಲಗುವಳು. ಎಲ್ಲ ನಿಶ್ಶಬ್ದವಾದುದನ್ನು ಗಮನಿಸಿ ಚಂಪಿ ತನ್ನ ರೂಮಿನಲ್ಲಿ ಕನ್ನಡಿ ಮುಂದೆ ನಿಂತು ಇನ್ನಷ್ಟು ಶೃಂಗಾರವಾಗುತ್ತಿದ್ದಾಳೆ. ಆಗಾಗ ಕಿಟಕಿಯಿಂದ ಹೊರಗೆ ಇಣಕುತ್ತಿದ್ದಾಳೆ. ಶೀಲಕ್ಕ ತನ್ನ ರೂಮಿನಲ್ಲಿ ಉರಿಯುತ್ತಿರುವ ದೀಪ ಆರಿಸಿ ಮೆಲ್ಲಗೆ ಹೊರಬರು ತ್ತಾಳೆ. ಹಲವು ಮೆಟ್ಟಿಲು ಇಳಿಯುವಷ್ಟರಲ್ಲಿ ಹೊರಗಿನಿಂದ ಗೌಡ್ತಿ ಬರುತ್ತಿರುವುದು ಗೊತ್ತಾಗಿ ಮತ್ತೆ ಹಿಂದೆ ಸರಿಯು ತ್ತಾಳೆ. ಗೌಡ್ತಿ ಬಂದು ತುಸು ಯೋಚಿಸಿ ಅಲ್ಲೇ ತೂಗು ಹಾಕಿದ್ದ ಬಾರೂಕು ತೆಗೆದುಕೊಳ್ಳುತ್ತಾಳೆ.) |

ಗೌಡ್ತಿ    ದುರ್ಗೀ

ದುರ್ಗಿ    (ಏಳುತ್ತ) ಏನ್ರವ್ವಾ ?

ಗೌಡ್ತಿ    ಯಾರೋ ನಮ್ಮ ಬಣಿವೀ ಸುತ್ತ ನಡದಾಡಿಧಾಂಗಿತ್ತು. ನೀ ಏನಾರ ನೋಡೀಯೇನು ? ನಾಕೈದ ದಿನಾ ಹಿಂಗಾತು....

ದುರ್ಗಿ    ಇಷ್ಟದಿನ ನನ್ನ ಕಣ್ಣಿಗ್ಯಾರೂ ಬಿದ್ದೇ ಇಲ್ಲರಿ.

ಗೌಡ್ತಿ.    ಈ ಹುಲಿಗೊಂಡ ಎಲ್ಲಿ ಹೋಗಿದ್ದಾನು ? ಮುನ್ಯಾಗ ಗಂಡಸಿದ್ದೂ ಇಲ್ಲಧಾಂಗಾಗೇತಿ. ಹೋಗಿ ನೋಡಿ ಬರೋಣು, ಬಾ.

(ಗೌಡ್ತಿ ಹೊರಡುವಳು, ದುರ್ಗಿಯೂ ಬೆನ್ನು ಹತ್ತುವಳು. ಇಬ್ಬರೂ ಹೊರಗೆ ಹೋಗುತ್ತಲೂ ಶೀಲಕ್ಕ ಮೆಲ್ಲಗೆ ಕೆಳಗಿಳಿದು ಬರುವಳು. ಪಾರೋತಿಯ ರೂಮಿನಲ್ಲಿ ಹಣಿಕಿ, ಅವಳು ಮಲಗಿದ್ದು ಖಾತ್ರಿಯಾಗಿ ಚಂಪಿಯ ರೂಮಿಗೆ ಹೋಗುವಳು. ಗೌಡ್ತಿ ಇರೋತನಕ ಮಲಗಿದಂತೆ ನಟಿಸುತ್ತಿದ್ದ ಚಂಪಿ ಎದ್ದು ಕಿಟಕಿಯಲ್ಲಿ ಹಣಿಕಿ, ಹೊರಡುವ ಸಿದ್ಧತೆಯಲ್ಲಿದ್ದಾಗ ಶೀಲಕ್ಕ ಬಾಗಿಲಲ್ಲಿ ಕಾಣಿಸುತ್ತಾಳೆ. ಮೊದಮೊದಲು ಪಾರೋತಿಗೆ ಕೇಳಿಸದಂತೆ ಮಾತಾಡುತ್ತಿದ್ದರೂ ಆತಂಕ ಹೆಚ್ಚಾದಂತೆ ಇಬ್ಬರ ದನಿಗಳೂ ಸಾಮಾನ್ಯ ಮಟ್ಟಕ್ಕೆ ಏರುತ್ತವೆ.)

ಶೀಲಕ್ಕ    ಏನು ! ಮಲಗಬೇಕಾದರೂ ಇಷ್ಟ ಸಿಂಗಾರ ಆಗಬೇಕ ? ಓಹೊ ! ಕನಸಿನಾಗೂ ಚಂದ ಕಾಣಬೇಕಲ್ಲ, ಅದಕ್ಕs ಇರಬೇಕು.

ಚಂಪಿ    ನನ್ನ ಹಾಂಗ ನೋಡಬ್ಯಾಡ, ನೋಡಿದರ ನಿನ್ನ ಮುಖದ ಮ್ಯಾಲ ವಾಂತೀ ಮಾಡಿಕೋತೀನಿ.

ಶೀಲಕ್ಕ    ನಿನ್ನೆ ರಾತ್ರಿ ಎಷ್ಟೊತ್ತಿಗಿ ಮಲಗಿದಿ ?

ಚಂಪಿ    ಯಾಕ ?

ಶೀಲಕ್ಕ    ರಾತ್ರಿ ಹಿತ್ತಲಾಗ ಕುದರೀ ಸಪ್ಪಳ ಕೇಳಿಸ್ತು.

ಚಂಪಿ    ಕುದರಿ ಹಗ್ಗಾ ಹರಕೊಂಡು ಓಡ್ಯಾಡಿರಬೇಕು.

ಆದರ ಮ್ಯಾಲ ಯಾರೋ ಕುಂತಿದ್ದರು !

ಚಂಪಿ    ನಿನಗ ಹ್ಯಾಂಗ ಗೊತ್ತಾಯ್ತು ?

ಶೀಲಕ್ಕ    ನಾ ನೋಡಿದೆ.

ಚಂಪಿ : ಯಾರು ?

ಶೀಲಕ್ಕ : ಮಾವ.

ಚಂಪಿ : (ಶೀಲಕ್ಕನ ಜುಟ್ಟು ಹಿಡಿಯುತ್ತ)
ಹುಚ್ಚರಂಡೆ ಸುಳ್ಳ್ಯಾಕ ಹೇಳ್ತಿ ?

(ಇಬ್ಬರೂ ತುಸು ಹೊತ್ತು ಕಿತ್ತಾಡುವರು. ಶೀಲಕ್ಕ ಬಿಡಿಸಿಕೊಂಡು)

ಶೀಲಕ್ಕ : ಸುಳ್ಳ ? ಹೋಗಿ ಕಿಡಕ್ಯಾಗ ನೋಡು.

(ಚಂಪಿ ಕಿಡಕಿಯಲ್ಲಿ ನೋಡಿ ತುಡುಗು ಸಿಕ್ಕಿದ್ದಕ್ಕೆ ಆತಂಕಗೊಳ್ಳುವಳು.)

ಶೀಲಕ್ಕ : ಯಾರಿದ್ದಾರ ಹೇಳಲ್ಲ,

ಚಂಪಿ : ಹೌದು, ಮಾವನs

(ಶೀಲಕ್ಕ ಜಗಳದಿಂದ ಅಸ್ತವ್ಯಸ್ತವಾಗಿರುವ ತನ್ನ ಉಡುಪನ್ನು ಸರಿಪಡಿಸಿಕೊಳ್ಳುವಳು. ಹೊರಗೆ ಪಡಸಾಲೆಯಲ್ಲಿ ಗೌಡ್ತಿ, ಆವಳ ಹಿಂದಿನಿಂದ ದುರ್ಗಿ ಬರುವರು.)

ಚಂಪಿ : ಇಷ್ಟದಿನ ಕೊಮಾಲಿ ಏನ ಮಾಡತಾಳಂತ ಕದ್ದ ಕದ್ದ ನೋಡತಿದ್ದಿ. ಈಗ ನನಗೂ ಗಂಟ ಬಿದ್ದೇನs ಬೇತಾಳ ? ಸಾಕ್ಶೈದ ಸಲ ನಿನ್ನ ಕನಸಿನಾಗ ನೋಡಿದೆ. ನಾಕ್ಶೈದ ಸಲsನೂ ಸತ್ತಿದ್ದಿ. ಮತ್ತ ಜೀವಂತ ಎದ್ದ ಬಂದ ನನ್ನ ಬೆನ್ನ ಯಾಕ ಕಾಯತೀಯ ?

ಶೀಲಕ್ಕ : ಯಾಕ ಗೊತ್ತಿಲ್ಲಾ; ಮನಿತನದ ಮಾನಾ ಕಾಯಾಕ. ಹುಲಿಗೊಂಡ ಮಾವ, ನಮ್ಮಿಬ್ಬರ ಅಕ್ಕನ ಗಂಡ, ನೆಪ್ಪಿರಲಿ.

ಚಂಪಿ ; ನಿನ್ನಷ್ಟs ನನಗೂ ಗೊತ್ತೈತಿ.

ಶೀಲಕ್ಕ : ಗೊತ್ತಿದ್ದಿದ್ದರ ಹಿಂಗ ಮಾಡತಿರಲಿಲ್ಲ.

ಚಂಪಿ : ದೇವರೂ, ನಿನ್ನ ಕುರಡೀನ ಮಾಡಿದ್ದರ ಎಷ್ಟ ಚೆಲೋ ಇತ್ತು, ಗೊತ್ತಾ ?

ಶೀಲಕ್ಕ : (ಮೈಮೇಲಿನ ಗಾಯಗಳನ್ನು ಸಾವರಿಸಿಕೊಳ್ಳುತ್ತ)
ಮಾವನ್ಹಾಂಗs ಎಷ್ಟ ಕಸುವಿದ್ದೀಯ ?

ಚಂಪಿ : ಮಾವನ ಕಸುವು ನಿನಗೂ ಗೊತ್ತಾಗೇತಿ!....

ಶೀಲಕ್ಕ : ಬಾಯ ಮುಚ್ಚದಿದ್ದರ ನೀ ಮಾಡೋದನ್ನೆಲ್ಲಾ ಅವ್ವಗ ಹೇಳ್ತೀನ್ನೋಡು.

ಚಂಪಿ : ಹೇಳ ಹೋಗs. ಮೊನ್ನೆ ನೀ ಮಾವನ ಕೆಳಗ ಉಳ್ಳಾಡಿ ಬಂದದ್ದು ನನಗ ಗೊತ್ತಿಲ್ಲಂದಿ? ಮೈಗೆಲ್ಲ ಕೇದರಿ ಲದ್ದಿ ಹತ್ತಿತ್ತು....

ಶೀಲಕ್ಕ : ಥೂ ದರಿದ್ರ ರಂಡೆ!

(ಇದನ್ನು ಕೇಳಿ ಗೌಡ್ತಿ ಕುಸಿಯುವಳು. ಮಾತಿಲ್ಲದೆ ದುರ್ಗಿ ಅವಳ ಸಹಾಯಕ್ಕೆ ಒದಗುವಳು.)

# ಬ್ಯಾಡ ! ಬ್ಯಾಡ !

(ಪಡಸಾಲಿಯಲ್ಲಿ ಗೌಡ್ತಿ ಕೈಮೇಲಿ ತಲೆಯೂರಿ ಚಿಂತಾಮಗ್ನಳಾಗಿ ಕುಳಿತಿದ್ದಾಳೆ. ದುರ್ಗಿ ಸಹಾನುಭೂತಿಯಿಂದ, ಹೇಗೆ ಸಮಾಧಾನ ಮಾಡಬೇಕೆಂದು ತಿಳಿಯದೆ ಕುಳಿತಿದ್ದಾಳೆ. ಚಂಪ್ಲಿ ತನ್ನ ರೂಮಿನಲ್ಲಿ ಕಿಡಕಿಯಲ್ಲಿ ಏನನ್ನೋ ತದೇಕ ಧ್ಯಾನದಿಂದ ಚಿಂತಿಸುತ್ತ ನಿಂತಿದ್ದಾಳೆ.)

ದುರ್ಗಿ : ಸಮಾಧಾನ ತಗೊಳ್ರಿವ್ವಾ, ಮಾತಾಡಿ ಮನಸ ಹುಣ್ಣ ಮಾಡಿದರ ಏನ ಬಂತು ? ಈಗೇನ ಅಂಥಾದ್ದಾಗೇತಿ ?

ಗೌಡ್ತಿ : ನಿನ್ನಿ ರಾತ್ರಿ ನೀನs ಕೇಳಲಿಲ್ಲೇನ ? ಇನ್ನೂ ಏನ ಆಗೋದ ಬಾಕೀ ಐತಿ ?

ದುರ್ಗಿ : ಆಗೋದ ಆಗೇತಿ, ಇನ್ಹೆಂಗ ಸುಧಾರಿಸಬೇಕಂತ ನೋಡ್ರಿ ಹಿಂಗಾತಲ್ಲಾ ಅಂತ ಕುಂತರ ಏದಕ್ಕ ಬಂತು ?

ಗೌಡ್ತಿ : ಅಕ್ಕಾ ತಂಗೇರಾಗಿ, ಒಂದ ಹೊಟ್ಟೀಲೆ ಹುಟ್ಟಿದವರಾಗಿ ಹಿಂಗ ಮಾಡೋದು ಉಂಟೇನ ?

ದುರ್ಗಿ : ವಯಸ್ಸಿಗಿ ಬಂದಾರೆವ್ವಾ, ಏನೋ .

ಗೌಡ್ತಿ : ನನ್ನ ಮಕ್ಕಳ ವಯಸ್ಸ ನನಗ್ಗೊತ್ತಿಲ್ಲೇನ ?

ದುರ್ಗಿ : ಗೊತ್ತಿದ್ದರ ಶೀಲಕ್ಕನ ಮದಿವೀದೂ ಹೆಂಗರೆ ಗಟ್ಟಿಮಾಡಿ ಬಿಡ್ರಿ....

ಗೌಡ್ತಿ : ಹಾಂಗಂತ ಹಾದಿ ಬೀದೀಲೆ ಹೋಗವರಿಗಿ ಕಟ್ಟಾಕ ಆಗತ್ಯೇತೇನ? ನೋಡಿದಿಲ್ಲೊ - ಬಡವ ಅಂತ ಪಾರೋತೀನ ಕೊಟ್ಟರ ಮನ್ಯಾಗ ಹೆಂಗ್ಹಂಗ ಹಾರ್‍ಯಾಡತಾನ! ಸಲಿಗೀ ನಾಯೀ ತಲೀಗೇರಿಸಿಕೊಂಡ್ಹಾಂಗ ಆಗೇತಿ !

ದುರ್ಗಿ : ಆಗೋದ ಆಗಿ ಹೋಯ್ತಲ್ಲವಾ, ಗ್ಯಾಡೀ ತೊಳದಷ್ಟು ರಾಡಿ ಬರತೈತಿ, ಸುಮ್ಮನ ಅದನ್ಯಾಕ ಅಡಿ ಕೆದಕ್ತೀರಿ ?

(ಅಷ್ಟರಲ್ಲಿ ಪಾರೋತಿ ಹುಲಿಗೊಂಡನನ್ನು ಕರೆದುಕೊಂಡು ಬರುವಳು. ಗೌಡ್ತಿ ಬಿಗುಮಾನದಿಂದಲೇ ಮಾತಾಡುವಳು. ಚಂಪಿ ತನ್ನ ರೂಮಿನಲ್ಲಿ ಯಾರಿಗೂ ಕಾಣದಂತೆ ನಿಂತು ಇವರ ಮಾತು ಕೇಳಿಸಿಕೊಳ್ಳುವಳು.)

| | |
|---|---|
| ಗೌಡ್ತಿ | ಹುಲಿಗೊಂಡಾ, ಇಂದs ಬೀಗರ ಊರಿಗಿ ಹೋಗು. ಅದೇನೋ ಇಪ್ಪತ್ತೈದ ಸಾವಿರ ವರದಕ್ಷಿಣೆ ಕೊಡಬೇಕಂತಿದ್ದರಲ್ಲ,—ಎಷ್ಟ ಆಗತೈತೋ ಅಷ್ಟ ಕಡಿಮಿ ಮಾಡಾಕ ಖಟಪಟಿ ಮಾಡು. ಅಷ್ಟ ಬೇಕs ಬೇಕಂತ ಅವರೇನಾದರೂ ಹಟ ಹಿಡಿದರ, ಹೋಗಲಿ ಅಷ್ಟಕ್ಕs ಒಪ್ಪಿಕೊಂಡ ಬಾ. |
| ಹುಲಿಗೊಂಡ | ಕುದರೀ ನಾಲ ಬಡಸಾಕ ನಾ ಇಂದ ಗೋಕಾವಿಗಿ ಹೊಂಟೇನಿ. |
| ಪಾರೋತಿ | ಕುದರೀ ನಾಲ ನಾಳಿ ಬಡಸಾಕ ಆಗಾಣಲ್ಲಾ ? |
| ಹುಲಿಗೊಂಡ | ಇಲ್ಲ. |
| ಗೌಡ್ತಿ | ಮನೀ ಅಳಿಯಾ ಆಗಿ ನೀ ಹಿಂಗ ಮಾಡಿದರ ಹೆಂಗೋ ತಮ್ಮಾ ? ಕುದರೀ ನಾಲ ದೊಡ್ಡದೊ ? ಮದಿವೀ ವ್ಯವಹಾರ ದೊಡ್ಡದೊ ? ನಾಲ ಬಡಿಯುವರು ನಾಳಿಗೆಂದರ ಎಲ್ಲಿ ಓಡಿ ಹೋಗತಾರೇನು ? ಹುಚ್ಚರ್ಹಾಂಗ ಆಡಬ್ಯಾಡ. ಇಂದs ಹೋಗಿ ಬಾ. |
| ಹುಲಿಗೊಂಡ | ನನಗ ಮದಿವೀ ವ್ಯವಹಾರ ತಿಳಿಯಾಣಿಲ್ಲ. |
| ಗೌಡ್ತಿ | ಜೋಡಿ ಯಾರನ್ನಾದರೂ ಕರಕೊಂಡ ಹೋಗು. |
| ಹುಲಿಗೊಂಡ | ಆ ಜೋಡಿದಾರ್ನs ಕಳಸರಿ. |
| ಪಾರೋತಿ | ಹೋಗಲಿ, ಬೀಗರ್ನs ಇಲ್ಲಿಗಿ ಕರಕೊಂಡಾದರೂ ಬಾ. |
| ಹುಲಿಗೊಂಡ | ಅದಕ್ಕ ನಾನs ಆಗಬೇಕಂತೇನು ? |
| ಪಾರೋತಿ | ಸುತ್ತಿ ಸುತ್ತಿ ಯಾಕ ಮಾತಾಡ್ತಿ ? ನನ್ನಿಂದ ಆಗೋದಿಲ್ಲಾ—ಅನ್ನು. ಚಂಪೀನ ಮದಿವೀ ಮಾಡಿಕೊಡಾಕ ಮನಸ್ಸ ಹೆಂಗ ಬಂದೀತ ಹೇಳು; ದಿನಾ ತೆಕ್ಕಿ ತುಂಬ ಸುಖ ಕೊಡತಾಳ ! |
| ಗೌಡ್ತಿ | ಪಾರೋತಿ ನೀ ಸುಮ್ಮಕಿರು. ಹುಲಿಗೊಂಡಾ, ಮನೀ ವ್ಯವಹಾರ ಅಂದಮ್ಯಾಲ ಮನಿಯವರು ಮಾಡಬೇಕೋ ಹೊರಗಿನವರು ಮಾಡಬೇಕೊ ? |
| ಹುಲಿಗೊಂಡ | ನಾ ಈ ಮನೆಯವನಲ್ಲ. |

(ಸನ್ನಿವೆ ಹೋಗುವನು ಗೌಡ್ತಿ ಬೆರಗು ಕೋಪಗಳಿಂದ ಕೂರುವಳು. ಪಾರೋತಿ ಉಳಿದವರ ಆಶ್ಚರ್ಯ ಗಮನಿಸದೆ ಮಾತಾಡತೊಡಗುವಳು.)

ಪಾರೋತಿ ನೋಡ, ಹೆಂಗಿದ್ದ ನಾಡ ಬಡವ! ಒಂದುಪವಾಸ ಎರಡುಪವಾಸ ಸ ( ತಿಗ್ದು ಏನೋ ನಾನs ದೊಡ್ಡ ಮನಸ್ಸ ಮಾಡಿ ಗೌಡ್ಕೀ ಬಿಡದ ಕೊಟ್ಟು ಮದಿವ್ಯಾದರ ತಲೀಮ್ಯಾಲ ಮೆಣಸ ಅರೀತೇನಂತಾನ! ಜೇಡಿ ಬಂದಿರಬೇಕ ಬಾ. ಬರಿಗೈಲೆ ಬಂದ ನ ಕೈ( ಾಗ ಅಕ್ಷಿ ಪಾಸ್ತಿ ಕೊಟ್ಟರ ಉಣ್ಣಾಕ ಬರ ಬೇಕಲ್ಲ! ಯಾಕ? ಹಣ್ಯಾಗ ಬರದಿಲ್ಲ ನೋಡು.

(ಪಾರೋತಿ ಮಾತಾಡುತ್ತಿರುವಂತೆಯೇ ಹೊರಗೆ ಜನರ ಗಲಾಟೆ, "ಎಳಕೊಂಬರ್‍ರ್ಯೋ ಬಿದ್ದಾಡೀನ" "ಓಡಿಬಂದಾಳ ಮತ್ತ" "ಬಿಡಬ್ಯಾಡ ಆ ರಂಡೀನ" ಇಂಥಾದ ಮಾತುಗಳು ಕೇಳಿ ಬರುತ್ತವೆ ಪಾರೋತಿ ಮಧ್ಯೆ ತನ್ನ ಮಾತು ನಿಲ್ಲಿಸ ಬೇಕಾಗಿ ಬಂದ ದಕ್ಕೆ ಅಸಮಾಧಾನ ವ್ಯಕ್ತಪಡಿಸುತ್ತ ತನ್ನ ರೂಮಿಗೆ ಹೋಗಿ ಬಿದ್ದುಕೊಳ್ಳುವಳು. ದುರ್ಗಿ ಗೌಡ್ತಿಯ ಮನದಿಂಗಿತ ತಿಳಿದುಕೊಂಡು ಅವಳಿಗೆ ಪರದೆ ಅಡ್ಡಗಟ್ಟಿ ಹೊರಗೆ ಹೋಗುವಳು. ರಾಯಪ್ಪ ಮತ್ತು ಅವನ ಮಿತ್ರರು ಕೊರವಾಲಿಯನ್ನು ಎಳೆದು ತರುವರು. ಚಂಪಿ ಈಗ ತನ್ನ ಹಾಸಿಗೆಯ ಮೇಲೆ ಆಯಾಸದಿಂದ ಒರಗುವಳು.)

ರಾಯಪ್ಪ : ಎವ್ವಾ ಗೌಡ್ತಿ, ಶರಣ್ರಿ; ನಾ ರಾಯಪ್ಪ.

ಗೌಡ್ತಿ : ಮತ್ತೇನಪಾ ? ಇನ್ನs ಬಾಳುವೇಕ ಹತ್ತಲಿಲ್ಲs ಇವಳು ?

ರಾಯಪ್ಪ : ಬಾಳ್ವೆ ಮಾಡೋ ಹೆಂಗಸೇನ್ರಿ ಎವ್ವಾ ಇದು? ಈ ಹೇಂತಿನೂ ಸಾಕು, ಈ ಊರ ಬೀಗತನಾನೂ ಸಾಕು. ಸ್ವಂತ ಹಡದವ್ವಂತ ತಿಳಕೊಂಡ ಹೇಳ್ತೇನ್ರೆವ್ವಾ, ನೀವು ಹೇಳಿ ಕಳಿಸಿದ ಮ್ಯಾಲ ಒಂದ್ ಹತ್ತ ದಿನ ರಾಮಕೊಂಡ ಇದ್ಧಾಂಗ ಮಾಡಿದ್ಲು ಹಾದಿಗಿ ಬಂದ್ಳಂತ ನಾನೂ ನೈಮಾರತೆ. ಇದ್ದಕ್ಕಿದ್ದಾಂಗ ಒಂದ ದಿನ ಹರೀಹತ್ತ ನೋಡತೀನಿ, 'ಮನೀ' ಎಲ್ಲಾ ಬಳಕೊಂಡ, ಯಾರನ್ನೋ ಕಟಕೊಂಡ ಪರ್‍ರ್ಯಾರಿ ಆಗ್ಯಾಳ! ಈಕೀನ ಪತ್ತೇ ಮಾಡಾಕ, ಖರೇ ಹೇಳ್ತೇನ್ರೆವ್ವಾ, ಜೋಡ ಕಾಲ್ಮರಿ ಸವದ ಹೋದವು. ಮೊನ್ನಿ ನಿಮ್ಮ ಊರಿಗಿ ಬಂದ್ಯಾಳಂತ ಸುದ್ದಿ

ಗೊತ್ತಾಗಿ ಬಂದವ್ವ. ಬಂದ ನೋಡಿದರ ಆಗಲೇ ಬಸರೂ ಆಗ್ಯಾಳ!

ಗೌಡ್ತಿ ಬಸರ!

ರಾಮಪ್ಪ ಅದೇನs ಹೇಳ್ರಿ ನೀವಪ್ಪ. ಆದರ ನೀವs ನನ್ನ ಮಾನ ಕಾಪಾಡ ಬೇಕ್ರಿ ತಾಯೀ.

ಗೌಡ್ತಿ ವಿಚಾರ ಮಾಡೂಣು, ತುಸು ತಡೀಬೇಕಪ.

ರಾಮಪ್ಪ ಏನ ವಿಚಾರ ಬ್ಯಾಡ, ವಿಚಾರ ಬ್ಯಾಡ, ನನ್ನ ಮನ್ಯಾಗಿನ ದಾಗೀನ ತಂದಾಳ ಅದನ್ನಷ್ಟ ಕೊಡಸರಿ; ಸೋಡ ಪತ್ರ ಮಾಡಿಸಿ ಬಿಡರೆವ್ವ. ಇಷ್ಟs ಸಾಕು.

ಗೌಡ್ತಿ ನಿನ್ನ ಗಂಡ ಹೇಳಿದ್ದ ಖರೇ ಏನs ಕೊಮಾಲಿ?

ಕೊಮಾಲಿ ಹೌಂದು

ಗೌಡ್ತಿ ಬಸರಾದದ್ದೂ ಖರೇ ಏನ ?

ಕೊಮಾಲಿ ಹೌದು

ಗೌಡ್ತಿ ಗಂಡನಿಗೊ ? ಮಿಂಡನಿಗೊ ?

ಕೊಮಾಲಿ ಮಿಂಡರಿಗೆ

ಗೌಡ್ತಿ ಮಾಡೋದೆಲ್ಲಾ ಮಾಡಿ ಹಾದರ ಮಾಡಿದೇ ಅಂತ ಹೇಳೋವಷ್ಟ ಧೈರ್ಯ ಬಂತೇನs ನಿನಗ? ನಿನ್ನ ಹಾಂಗಸುವಂಥವರು ಈ ಊರಾಗ ಯಾರೂ ಇಲ್ಲಂತ ತಿಳಕೊಂಡಿ? ನೀ ಏನ ಮಾಡೀದೀ, ನಿನ್ನ ಹೊಟ್ಟ್ಯಾಗಿನ ಪಿಂಡ ಮಾಡಿದ ಗಾಳಿ ಬಿಡತೈತಿ! ಗಂಡನ ಮನೀನ ಕೊಡ್ದು, ಈ ಊರಾಗೂ ಇರಬ್ಯಾಡ; ಇಲ್ಲಿ ಹಾಳಾಗಿ ಹೋಗ್ತಿ ಹೋಗು. ಈ ಊರಾಗಿನ ಯಾರಾದರೂ ತುತ್ತ ಅನ್ನ ಹಾಕಿದರ, ಅವರನ್ನ ಸುಡತೀನಿ. ಹೊರಬೀಳು.

(ಗೌಡ್ತಿಯ ಮಾತನ್ನು ಕೇಳಿ ಚಂಪಿ ಭಯಗೊಂಡು ಥಟ್ಟನೆ ಎದ್ದುನಿಂತು ತನ್ನ ಹೊಟ್ಟೆ ಹಿಡಿದುಕೊಂಡು "ಬ್ಯಾಡ ಬ್ಯಾಡ!" ಎಂದು ಕಿರುಚುತ್ತಾಳೆ. ತಕ್ಷಣ ತಾನು ಚೀರಿದ್ದು ಅರಿವಾಗಿ "ಬ್ಯಾಡ ಬ್ಯಾಡ" ಎಂದು ದನಿಯಿಲ್ಲದೆ ಬರೀ ತುಟಿಯಲ್ಲೇ ಗೊಣಗುತ್ತ ಮತ್ತೆ ಮಂಚದ ಮೇಲೆ ಒರಗುತ್ತಾಳೆ. ಹೊರಗಿನವರಿಗೆ ಇವಳು ಕಿರುಚಿದ್ದು ಕೇಳಿಸಿ, ಎಲ್ಲರೂ ಆ ಕಡೆ ನೋಡು

ತ್ತಾರೆ. ಗೌಡ್ತಿ ಕ್ಷಣ ಅದನ್ನು ಗಮನಿಸಿ ಅವರನ್ನೆಲ್ಲ ಹೊರಗೆ ಕಳಿಸುವ ತರಾತುರಿಯಲ್ಲಿದ್ದಾಗ)

ಕೊಮಾಲಿ ಗಂಡಂದರ ಇವನೊಬ್ಬನ್ನs ಅಲ್ಲ. ಊರಂದಕ ಇದೊಂದs ಅಲ್ಲ.

(ಎನ್ನುತ್ತ ಹೋಗುವಳು. ಗೌಡ್ತಿಗೆ ಇನ್ನೂ ಕೋಪ ಬರುವುದು)

ಗೌಡ್ತಿ ಏ ಹಳಬಾ, ಪಂಚರಿಗಿ ಹೇಳು,—ಈ ರಂಡೀನ ಈಗಿಂದೀಗ ಊರ ಬಿಟ್ಟ ಹೊರಗ ಹಾಕಂತ.

ಹಳಬ ಆಗಲೆವ್ವ.

ಗೌಡ್ತಿ ಹೋಗ್ರೆಪ ಇನ್ನ

(ಎಲ್ಲರೂ ಹೊರಗೆ ಹೋಗುವರು. ಗೌಡ್ತಿ ಸಿಟ್ಟಿನಿಂದ ಪರದೆ ಹರಿದು ಚಂಪಿಯ ರೂಮಿನತ್ತ ಬೆಕ್ಕರಿಸಿ ನೋಡುತ್ತ)

ಗೌಡ್ತಿ ಏ ದುರ್ಗಿ

ದುರ್ಗಿ ಎವ್ವಾ

ಗೌಡ್ತಿ ಈಗಿಂದೀಗ ಬೀಗರ ಊರಿಗಿ ಹೋಗು. ಇಪ್ಪತ್ತೈದಲ್ಲ, ಐವತ್ತ ಸಾವಿರ ವರದಕ್ಷಿಣೆ ಕೇಳಿದರೂ ಒಪ್ಪಿಕೊ. ಎಂದ ಮೊದಲನೇ ಮುಹೂರ್ತ ಐತಿ ನೋಡು, ಅಂದs ಮದಿವಿ! ಮದಿವೀ ಇಲ್ಲೇ ನಮ್ಮೂರ ಶಿವಲಿಂಗನ ಗುಡ್ಯಾಗಂತ ಹೇಳು. ಮುಹೂರ್ತ ನಾಳೇ ಇದ್ದರ ದಿಬ್ಬಣ ನಿನ್ನ ಜೋಡೀನs ಕರಕೊಂಬಾ. ತಿಳೀತಿಲ್ಲ ?

ದುರ್ಗಿ (ಚಿಂತೆಯಿಂದ) ಹೂನ್ರಿ.

ಗೌಡ್ತಿ ಮತ್ತ ಹೊರಡೀಗ.

# ನೀವೆಲ್ಲಾ ಬದುಕಬೇಕ್ರ ಎಪ್ಪಾ

(ಮದುವೆ ಸಂಭ್ರಮ. ಮನೆಯನ್ನು ಶೃಂಗರಿಸಲಾಗಿದೆ. ಹೊರಗೆ ಮಂಗಳವಾದ್ಯ ಕೇಳಿಸುತ್ತಿದೆ. ಎಲ್ಲರೂ ಹೊಸ ಸೀರೆ ಉಟ್ಟುಕೊಂಡಿದ್ದಾರೆ. ದುರ್ಗಿ ತುಂಬ ಗಡಿಬಿಡಿಯಿಂದ ಒಳಗಿಂದ ಏನೇನೋ ಸಾಮಾನು ತೆಗೆದುಕೊಂಡು ಹೊರಗೆ ಹೋಗುತ್ತಾಳೆ, ಬರುತ್ತಾಳೆ. ತುಸು ಸಮಯವಾದ ಮೇಲೆ ಬೀಗರ ಕಡೆಯ ಹೆಂಗಸರು ಮದುವೆ ಆಚರಣೆಗೆ ಸಂಬಂಧಪಟ್ಟ ಹಾಡುಗಳನ್ನು ಹೇಳುತ್ತ ಬರುತ್ತಾರೆ. ಒಳಗಿನಿಂದ ಗೌಡ್ತಿ ಬಂದು ಸ್ವಾಗತಿಸುತ್ತಾಳೆ. ಪಾರೋತಿ ಹಾಗೂ ಶೀಲಕ್ಕ ಹೋಗಿ ಶೃಂಗಾರಗೊಂಡಿರುವ ಚಂಪಿಯನ್ನು ಕರೆತರುತ್ತಾರೆ. ಹಸೆಮಣೆಯ ಮೇಲೆ ಕೂರಿಸುತ್ತಾರೆ. ಬೀಗಿತ್ತಿಯರು ಆರತಿ ಬೆಳಗಿ ವಧುವಿಗೆ ಹೊಸ ಸೀರೆ ಆಭರಣಗಳನ್ನು ಕೊಟ್ಟು ಹಾಡುತ್ತ ಹೋಗುತ್ತಾರೆ. ಅವರೊಂದಿಗೆ ಪಾರೋತಿ, ಗೌಡ್ತಿ, ಶೀಲಕ್ಕ ಹೋಗುತ್ತಾರೆ. ದುರ್ಗಿ ಒಳಗೆ ಹೋಗುತ್ತಾಳೆ. ಈಗ ಚಂಪಿ ಒಬ್ಬಳೇ ಯೋಚನಾಮಗ್ನಳಾಗಿ ಕೂತಿದ್ದಾಳೆ. ಅಷ್ಟರಲ್ಲಿ ಹುಲಿಗೊಂಡ ರಭಸದಿಂದ ಬರುತ್ತಾನೆ. ಆಶ್ಚರ್ಯವೆಂದರೆ ಅವನೊಬ್ಬನೇ ಈಗ ಹಳೇ ಉಡುಪಿನಲ್ಲಿ, ಅವನು ಈ ಹಿಂದೆ ಹೇಳಿದ್ದಂಥ, ಕುದುರೆ ಪಳಗಿಸುವಾಗ ಹರಿದು ರಕ್ತಮಯವಾಗಿದ್ದ ಅಂಗಿ ಹಾಕಿ ಹಳೇ ಧೋತ್ರ ಉಟ್ಟಿದ್ದಾನೆ. ಕುಳಿತ ಚಂಪಿಯನ್ನು ಪ್ರದಕ್ಷಿಸಿ, ಅವಳ ಗಮನ ಸೆಳೆಯಲು ಯತ್ನಿಸಿ, ಸೋತು ಅವಳನ್ನೇ ದಿಟ್ಟಿಸುತ್ತ ನಿಲ್ಲುತ್ತಾನೆ. ಚಂಪಿಯೀಗ ಕುತೂಹಲ, ಆಸೆಗಳಿಂದೆಂಬಂತೆ ಆಭರಣಗಳನ್ನು ಪರೀಕ್ಷಿಸಿ ನೋಡತೊಡಗುತ್ತಾಳೆ.)

**ಹುಲಿಗೊಂಡ** ಚಂಪೀ,

**ಚಂಪಿ** ಈ ಬಳಿ ನನ್ನ ಕೈಗಿ ಚಂದ ಕಾಣತಾವೇನ ಮಾವಾ ? ನೋಡು, ಮಣಕೈಮಟ ಇಡಿಸ್ಯಾರ. ಬಳಿ ಇಟಗೊಂಡ, ಹಣಿತುಂಬ ಕುಂಕುಮ ಹಚಿಕೊಂಡ ಕನ್ನಡಿ ನೋಡಿದರ, ಕನ್ನಡ್ಯಾಗ ನನ್ನ ಬದಲ ಗುಡ್ಡ್ಯಾಗಿನ ಮಾರಿ ಮುಡ್ಯಾಳ!

ಹುಲಿಗೊಂಡ : ಸೇಡ ತೀರಿತ ?

ಚಂಪಿ : ಮಾವಾ ಈ ಸರ ಎಷ್ಟು ಚೆಲೋ ಐತೆಲ್ಲಾ ? ಹದಿನೆಂಟ ತೊಲಿ ಐತೆಂತ !

ಹುಲಿಗೊಂಡ : ಇಂದಾದರೂ ಸೇಡ ತೀರಿಸಿಕೊಂಡಿಯೋ ಇಲ್ಲೊ— ಹೇಳು.

ಚಂಪಿ : ಇದೇನ ಮಾವಾ, ಹಳೀ ಅಂಗೀ ಹಾಕೀದಿ ! ನಾ ಮದಿವ್ಯಾಗರ ನಿನಗ ಆನಂದ ಆಗಲಿಲ್ಲೇನು ?

ಹುಲಿಗೊಂಡ : ಇಲ್ಲ.

ಚಂಪಿ : ಮತ್ತ ಯಾಕ ಇಲ್ಲಿ ನಿಂತೀದಿ ?

ಹುಲಿಗೊಂಡ : ಕಣ್ಣತುಂಬ ನಿನ್ನ ಮದಿವೀ ನೋಡಾಕ.

ಚಂಪಿ : ನಾ ನಿನ್ನ ಮದಿವೀ ನೋಡಿಧಾಂಗ

(ದುರ್ಗಿ ಬರುವಳು. ಪರಿಸ್ಥಿತಿಯನ್ನು ಗಮನಿಸಿ)

ದುರ್ಗಿ : ಎಪಾ ಹುಲಿಗೊಂಡಾ, ನಿನ್ನ ಕಾಲಿಗಿ ಬೀಳತೀನಿ. ಮಂಗಳ ಕಾರ್ಯೇ ನಡದೈತಿ, ಅಲ್ಲದ್ದ ಆಡಬ್ಯಾಡ. ಹೋಗಿ ಬೀಗರ್ನ ವಿಚಾರಿಸ್ಕೋ ಹೋಗು.

ಹುಲಿಗೊಂಡ : ನಾ ಏನೂ ಮಾಡೋದಿಲ್ಲ ತಡೀಬೆ. ತುಸು ಮಾತಾಡ್ತೀನಿ.

ದುರ್ಗಿ : ಅದೇನ ಮಾತು ? ಈಗs ಆಡಬೇಕ ?

ಹುಲಿಗೊಂಡ : ನನ್ನಿಂದೇನ ಅಡಚಣಿ ಆಗೇತೀಗ ?

ದುರ್ಗಿ : ಆಗದೇನು ? ಹಳೀ ಅಂಗೀ ಧೋತ್ರ ಉಟ್ಟ ಹೊರಗಿನವರ್ಹಾಂಗ ನಿಂತೀದಿ, ಬೀಗರೇನಂದಕೊಂಡಾರಂತ ತಿಳೀಬಾರದ ? ಹಂತ್ಯಾಕ ಬೆಂಕಿ ಐತೆಂತ ಸಿಕ್ಕಸಿಕ್ಕವರ ಮನೀಗಿ ಬೆಂಕೀ ಹಚ್ಚಬಾರದೋ ಮಗನs, ಬಾಳ್ವೀಕ ಬೆಳಕ ಕೊಡಬೇಕ.

(ಸೆರ್ರನೇ ಹುಲಿಗೊಂಡ ಹೊರಗೆ ಹೋಗುವನು. ದುರ್ಗಿಗೆ ಬಹಳ ಚಿಂತೆಯಾಗುತ್ತದೆ. ಅವನು ಹೋದ ರೀತಿಯಿಂದಲೇ ಅವಳಿಗೆ ಅಸಮಾಧಾನವಾಗಿದೆ. ಹಾಗೇ ನಿಂತಿರುವಾಗ ಚಂಪಿ ಮಾತಾಡುತಾಳೆ.)

ಚಂಪಿ ದುರ್ಗೀ,

ದುರ್ಗಿ ಆಂ ?

ಚಂಪಿ : ಕನಸಿನಾಗ ಮದಿವಿ ಆದರ ಚಲೋನೊ ? ಕೆಟ್ಟೊ ?

ದುರ್ಗಿ : (ಕೂರುತ್ತ) ಮದಿವಿ ? ಏನೇನ ಕನಸ ಕಂಡೇ ಎವ್ವಾ ?

ಚಂಪಿ : ನಿಬ್ಬಣ ಬಂದಿತ್ತು. ಹೊಸಾ ಸೀರೀ ಉಟಕೊಂಡ ಸಿಂಗಾರಾ ನಾ ಕುದರೀ ಮ್ಯಾಲ ಕೂತಿದ್ದೆ, ಅಷ್ಟರಾಗ ಕುದರಿ ದೊಡ್ಡ ದೊಡ್ಡದ ಆಗಿ, ... ಅಯಕ್ ಶಿವನ ಹಿಂಗ್ಯಾಕಂತ ನೋಡಿದರ— ಕುದರಿ ಮುಗಿಲತನಕ ಬೆಳದಿತ್ತು; ಇದೇನೆಂಬೋ ಕುದರಿ ಅಂತ ನೋಡತೀನಿ: ಮಾವನsು ಕುದರಿ ಆಗಿದ್ದ ! ಇನ್ನೆಂ ಮಾಡಲಿ ಮಾವಾ ಅಂತ ಅವನ್ನ ತಬ್ಬಿಕೊಂಡೆ. ತಡಿ ಅಂದವನ ಒಮ್ಮೆ ಮೈ ಝಾಡಿಸಿದ ಝಾಡಿಸಿದಾ,... ಆಕಾಸ ಗಡಗ ನಡಿಗಿ ತಾರಕ್ಕಿ ಬುಳು ಬುಳು ಉದರಿ ಬಿದ್ದಾಂಗಾದುವು ! ನ ಜೀವ ತಡೀಲಾರದ ಮುತ್ತಿನ್ಹ್ಯಾಂಗ ಬಿದ ಚಿಕ್ಕೀಸೆಲ್ಲಾ ಆರಿ ಉಡಿ ತುಂಬಿಕೊಳ್ತಾ ಇದ್ದೆ !

(ಅಷ್ಟರಲ್ಲಿ ಶೀಲಕ್ಕ ಅವಸರದಿಂದ ಬರು...

ಶೀಲಕ್ಕ : ದುರ್ಗೀ, ದೇವರ ಮನೀ ಟ್ರಂಕಿನಾಗ ಆಯೀ ಸೀರಿ ತಾಯಿ ಸೀರಿ ಅದಾವಂತ, ಲಗು ಕೊಡಂದಾಳ ಅವ್ವ.

ದುರ್ಗಿ : ಬರತೀನಿ ತಡಿ ಚಂಪಕ್ಕ ...

(ಒಳಗೆ ಹೋಗುವಳು. ಶೀಲಕ್ಕ ಶೃಂಗಾರಗೊಂಡ ಚಂ ಮತ್ತು ಅವಳ ಮುಂದಿನ ಆಭರಣ, ಕೈ ಬಳೆಗಳನ್ನು ಆಸೆಬುರು ತನದಿಂದ ನೋಡುತ್ತ)

ಶೀಲಕ್ಕ : ಕೈತುಂಬ ಬಳಿ ಇಟ್ಟಕೊಂಡಾಗ ಎಷ್ಟ ಚಂದ ಕಾಣ್ತೀಯೆ ಚಂಪಿ ! ನಿನ್ನ ನೋಡಿದರ ನಾ ಯಾವಾಗ ಮದಿವ್ಯಾದೇನೋ ಅನಸತೈತಿ. ಅಷ್ಟ್ಯಾಂದ ಬಳಿ ಅದಾವ ನನಗೊಂದ ಕೊಡಗ

ಚಂಪಿ : ಬೇಕ ?

ದುರ್ಗಿ : (ಒಳಗಿನಿಂದ) ಏನದು ಅಮಂಗಳ ? ಮದುಮಗಳ ಕೇಳತಾರೇನs—ಶೀಲಕ್ಕ ?

ಶೀಲಕ್ಕ : ಆಹಾ ! ಈ ದಾಗೀನ ಎಷ್ಟ ಚಂದ ಅದಾವ !

(ಎನ್ನುತ್ತ ಆಭರಣಗಳಿಗೆ ಕೈ ಹಾಕುವಳು. ಚಂಪಿ ಪಟ ಅವಳ ಕೈಗೆ ಏಟು ಹಾಕುವಳು.)

ಚಂಪಿ : ಮುಟ್ಟಿದರ ಕೈ ಕೀಳತೀನಿ.

(ಶೀಲಕ್ಕ ಎದ್ದು ಮಸಲತ್ತಿನಿಂದ ಚಂಪಿಯ ಹಿಂದಿನಿಂದ ಬಂದು ಆಭರಣಗಳಲ್ಲಿಯ ಸರಕ್ಕೆ ಕೈ ಹಾಕುವಳು. ಚಂಪಿ ದೃಷ್ಟಿಯಿಂದಲೇ ತಡೆಯುವಳು.)

ಶೀಲಕ್ಕ : ಆ ಸರಾನಾದರೂ ತೋರಿಸ್ಸ

ಚಂಪಿ : ಹೇಳಲಿಲ್ಲಾ ಕೈ ಕೀಳತೀನಂತ

ದುರ್ಗಿ : (ಒಳಗಿನಿಂದ) ನೋಡತಾಳಂತ ತೋರಸ್ಸ ಚಂಪಕ್ಕಾ

ಚಂಪಿ : (ಕಿರುಚುತ್ತ) ನಾ ತೋರಸಾಣೆಲ್ಲಾ.

ಶೀಲಕ್ಕ : ತೋರಸ್ಸ ..

(ಎಂದು ಸರಕ್ಕೆ ಕೈ ಹಾಕುವಳು. ಚಂಪಿ ತಕ್ಷಣ ಅವಳ ಕೈ ಹಿಡಿದೆಳೆದು ಕಚ್ಚುವಳು. ಶೀಲಕ್ಕ ಹಾ ಎಂದು ಕಿರುಚಿದೊಡನೆ ಕೈಬಿಡುವಳು. ಕೈಗೆ ನೋವಾಗಿದೆ. "ಹುಚ್ಚರಂಡೇ" ಎನ್ನುತ್ತ ಶೀಲಕ್ಕ ಚಂಪಿಗೆ ಏಟು ಹಾಕುವಳು. ಅದು ಅವಳ ಕೈ ಬಳೆಗೆ ತಾಕಿ ಬಳೆ ಒಡೆದು ಬೀಳುತ್ತವೆ. ಚಂಪಿಯ ಕೋಪ ನೆತ್ತಿಗೇರುತ್ತದೆ. ಕನಸಿನ ಭಯ, ಹುಲಿಗೊಂಡನ ಮಾತಿನಿಂದಾದ ಆತಂಕ, ಬಳೆ ಒಡೆದ ಅಪಶಕುನ— ಮೂರೂ ಸೇರಿ ಹುಚ್ಚಿಯಂತಾಗುತ್ತಾಳೆ.)

ಚಂಪಿ : ನಿನಗ ಈ ಬಳಿ ಬೇಕಲ್ಲ ? ತಗೊ, ತಗೊ ! ತಗೊ !

(ಎಂದು ಕಿರುಚುತ್ತ ಎರಡೂ ಕೈ ಕೈ ಕುಟ್ಟಿ ಬಳೆ ಒಡೆದುಕೊಳ್ಳುವಳು. ಶೀಲಕ್ಕ ಗಾಬರಿಯಿಂದ ಹೊರಗೆ ಓಡಿಹೋಗುವಳು. ದುರ್ಗಿ ಒಳಗಿನಿಂದ "ಚಂಪಕ್ಕಾ ಏನಿದೆಲ್ಲಾ ?" ಎನ್ನುತ್ತ ಓಡಿ ಬರುವಳು. ಬಳೆ ಒಡೆದು ಚಂಪಿಯ ಎರಡೂ ಕೈಗೆ ರಕ್ತ ಬರುತ್ತಿದೆ. ಚಂಪಿ ಆವೇಶದಿಂದ ಇನ್ನೂ ಕೈಕೈ ಕುಟ್ಟಿಕೊಳ್ಳುತ್ತಿದ್ದಾಳೆ. ದುರ್ಗಿ ತಾನೇನು ಮಾಡುತ್ತಿದ್ದೇನೆಂಬ ಅರಿವಿಲ್ಲದೆ ಚಂಪಿಯನ್ನೆಳೆದು "ಬಳಿ ಒಡಕೊಂಡೇನಸ್ಸ ರಂಡೆ ?" ಎನ್ನುತ್ತ ಚಂಪಿಯ ಕೆನ್ನೆ ಕೆನ್ನೆಗೆ ಬಾರಿಸುವಳು. ಚಂಪಿ ಬಿಡಿಸಿಕೊಂಡು–)

ಚಂಪಿ : ನಿನಗೇನ ಬೇಕು ?

(ಎಂದು ಕಿರುಚುವಳು. ದುರ್ಗಿಯ ಕೋಪ ಈಗ ದುಃಖವಾಗಿ ಪರಿಣಮಿಸುತ್ತದೆ)

ದುರ್ಗಿ : ನೀವೆಲ್ಲಾ ಬದಕಬೇಕs ಎವ್ವಾ!

(ಚಂಪಿಯು ದುಃಖ ಒತ್ತರಿಸಿ ಬಂದು ತಾಯಿಯನ್ನು ತಬ್ಬುವಂತೆ ದುರ್ಗಿಯನ್ನು ತಬ್ಬಿಕೊಳ್ಳುತ್ತಾಳೆ.)

ದುರ್ಗಿ : ಈ ಮನ್ಯಾಗ ಒಂದ ಸಿಡ್ಲ ಐತಿ. ಯಾವತ್ತೂ ಒಳಗೊಳಗs ಗುಡಗಾಡತೈತಿ. ಯಾವಾಗ ಯಾರ ಮ್ಯಾಲ ಬಿದ್ದೀತಂತ ಹೇಳಾಕ ಆಗವೊಲ್ದು. ಸಾಳೀಪಂದರ ಬರೀ ಬೆಂಕಿ ಅಲ್ಲs ಮಗಳ, ಬೆಳಕೂ ಇರತೈತಿ. ನಿನ್ನ ತಾಯೀ ಸಮ ಅಂತ ತಿಳಕೊ, ಕರಳ ಮುಟ್ಟಿಕೊಂಡ ಹೇಳತೀನಿ, ನನ್ನ ಮಾತ ಕೇಳು: ಮದಿವ್ಯಾಗು.

ಚಂಪಿ : ಏನ ಮಾಡಲಿ? ದಿನಾ ಹೋಧಾಂಗ ಹುಣ್ಣ ಹೋದೀತಂದರ ಹೆಚ್ಚೆಚ್ಚ ಉರುಪ ಬಿಡತೈತಿ. ಯಾರೆಲ್ಲಾ ಬಂದ ಇದರಾಗs ಚೂರೀ ಆಡಸ್ತಾರ ..

ದುರ್ಗಿ : ತಾಳಿಕೊ ಮಗಳ. ಇದರಿಂದ ಎಲ್ಲಾ ಬರೋಬರಿ ಆಗತೈತಿ. ನನ್ನ ಮಾತ ಕೇಳು: ಹೋಗಿ ಮುಖ ತೊಳಕೊಂಡ ಬ್ಯಾರೇ ಬಳಿ ಹಾಕ್ಕೊ. ಒಳಗ ನಡಿ, ನಾ ಹೋಗಿ ಸೀರೀ ಕೊಟ್ಟ ಬರತೀನಿ.

(ನಿಧಾನವಾಗಿ ನಡೆಸಿಕೊಂಡು ಹೋಗಿ ಅವಳ ರೂಮಿಗೆ ಕಳಿಸಿ ಹೋಗುವಳು. ಚಂಪಿ ತನ್ನ ಮಂಚದ ಮೇಲೆ ಕೂರುವಳು. ಹುಲಿಗೊಂಡ ರಭಸದಿಂದ ಬರುವನು.)

ಚಂಪಿ : ಮತ್ತೇನ ಗಾಳೀ ತಂದಿ

ಹುಲಿಗೊಂಡ : ನಾ ಹೊಂಟೇನಿ.

ಚಂಪಿ : ಹೋಗು— ಆದರ ಇಲ್ಲಿಗ್ಯಾಕ ಬಂದಿ?

ಹುಲಿಗೊಂಡ : ನಿನ್ನ ನೋಡಾಕ.

ಚಂಪಿ : ನೋಡಿ ನಗಾಕ?

ಹುಲಿಗೊಂಡ : ನಾ ನಕ್ಕರ ಇಡೀ ಊರಿಗೇ ಹುಚ್ಚ ಹತ್ತತೈತಿ.

ಚಂಪಿ : ನೋಡಿದ್ದಾಯ್ತಲ್ಲ, ಇನ್ನ ಹೋಗು

ಹುಲಿಗೊಂಡ : ಮದಿವ್ಯಾಗಿ ನೀ ಹೊಗ್ತಿ, ಮನೀಬಿಟ್ಟ ನಾ ಹೊಂಟೇನಿ. ಆಗಲೋ ಮುನ್ನ ನಾಕ ಮಾತ ಮಾತಾಡಬಾರದೇನು ?

(ನಿಶ್ಚಿಂತೆಯಿಂದ ಕೂತು ಬೀಡಿ ಹೊತ್ತಿಸುವನು.)

ಚಂಪಿ ಮಾತಿನಿಂದ ಏನೂ ಆಗೋದಿಲ್ಲ.

ಹುಲಿಗೊಂಡ ನನಗಿನ್ನೇನ ಮಾಡಂದಿ ?

ಚಂಪಿ ಕುದರೀ ಸವಾರ ಎಷ್ಟೆಲ್ಲಾ ಮಾಡಬಲ್ಲ. ಅದಕ್ಕಂತ್ಯ ಕುದರೀ ಹತ್ತಿದಿವಿ. ನೋಡಬಾರದ, ಎಲ್ಲಿ ಕಾಡಿನಾಗ ಚೆಲ್ಲತೈತೋ, ಕೊಳ್ಳದಾಗ ಚೆಲ್ಲತೈತೋ ! ನಾ ಬಸರಾಗೀನಿ ಗೊತ್ತಾ ?

ಹುಲಿಗೊಂಡ (ಆನಂದದಿಂದ)

ಏನ ಮಾಡಲೇ ನನ್ನ ಗೊಂಬೆ ? ಇಲ್ಲೀತನಕ ಏನೇನೋ ಕನಸ ಕಾಣತಿದ್ದೆ : ನಾ ನೀ ಇಬ್ಬರೂ ಕುದರೀ ಹತ್ತತೀವಿ. ಓಡಿಸಿ ಕೊಂಡ ಈ ಮಂದೀನ ಮೀರಿ, ಊರ ಮೀರಿ, ಹೊಳೀ ಹಾರಿ, ಸೀಮೀ ದಾಟಿ ಕಾಡಿಗಿ ಹೋಗತೀವಿ. ಅಲ್ಲಿ ನಮ್ಮಂಥ ಹುಚ್ಚರು ನಿಮ್ಮಂಥಾ ಹುಚ್ಚರ್‍ಯ ಇರತಾರ, ನಮ್ಮ ನಮ್ಮಲ್ಲಿ— ಗೌಡಿಕಿಲ್ಲ, ಹಳಬಿಲ್ಲ, ಆಳಾವ್ರಿಲ್ಲ, ಆಳಿಸಿಕೊಂಬಾವ್ರಿಲ್ಲ, ಎಲ್ಲರೂ ಸಮನಾಗಿ ಸಂಜೀತನಕ ದುಡೀತೀವಿ ತಿಂತೀವಿ—ಕಾಡನಾಗ ಹಾಡಿಕೊಂಡ ಅಡ್ಡಾಡತೀವಿ ! ಹಕ್ಕಿ ಹಾಡತಾವ, ಮರ ತೂಗತಾವ, ಗವಿ ಸಿಳ್ಳ ಹಾಕತಾವ, ಕಲ್ಲಬಂಡಿ ತಮ್ಮ ಎದ್ಯಾಗಿನ ನೀರ ಸುರೀತಾವ, ಕಾಡಿನ ಮಾತ ನಮಗ ತಿಳೀತಾವ. ನಮ್ಮ ಮಾತ ಕಾಡಿಗಿ ತಿಳೀತಾವ !

ಚಂಪಿ ನಮ್ಮಂಥಾ ಹುಚ್ಚರು ಅಲ್ಲಿ ಇರದಿದ್ದರ ?

ಹುಲಿಗೊಂಡ ಬ್ಯಾಡ. ನಮ್ಮ ಜೋಡಿ ಕಾಡ ಇರತೈತಿ ! ನಿನಗ್ಗೊತ್ತಿಲ್ಲ, ಕಾಡು ನರಮನಿಶ್ಯಾನಷ್ಟ ದುಷ್ಟ ಅಲ್ಲ.

ಚಂಪಿ ಇದೆಲ್ಲ ಕನಸ ಹೌಂದಲ್ಲೊ ?

ಹುಲಿಗೊಂಡ ಮಂದಿವ್ಯಾಗಿ ಹೊಂಟೇಯಲ್ಲ. ಇನ್ನಿದೆಲ್ಲಾ ಕನಸ್ಯ ಖರೆ.

(ಅಷ್ಟರಲ್ಲಿ ದುರ್ಗಿ ಅವಸರದಿಂದ ಪಡಸಾಲೆಗೆ ಬಂದು ಅಡಿಗೆ ಮನೆ ಕಡೆ ಹೋಗುತ್ತಾ)

ದುರ್ಗಿ : ಚಂಪಕ್ಕಾ ತಯಾರಾದೀ ? ಶೀಲಕ್ಕ ಎಲ್ಲಿ ಹೋದ್ಲು ?

(ಒಳಗೆ ಹೋಗುವಳು. ಹುಲಿಗೊಂಡ ಎದ್ದು ನಿಂತು)

ಹುಲಿಗೊಂಡ : ನಾ ಹೋಗತೀನಿ.

ಚಂಪಿ : ಎಲ್ಲಿಗೆ ?

ಹುಲಿಗೊಂಡ : ಕಾಡಿಗೆ.

ಚಂಪಿ : ನಾನೂ ಬರತೀನಿ.

(ಹುಲಿಗೊಂಡ ತಬ್ಬಿಬ್ಬಾಗುವನು)
ರಾತ್ರಿ ಕುದರೀ ತಯ್ಯಾರ ಮಾಡಿಕೊಂಡ ಕೊಟ್ಟಗ್ಯಾಗ ಕಾದಿರು.
ಬರತೀನಿ.

# ಗುರಿ ತಪ್ಪಿತು

(ಅದೇ ದಿನ ರಾತ್ರಿ ಎಲ್ಲರೂ ಉಂಡು ಮಲಗಿದ್ದಾರೆ. ಚಂಪಿ ತನ್ನ ರೂಮಿನಲ್ಲಿ ಚಡಪಡಿಸುತ್ತಿದ್ದಾಳೆ. ದೂರದಲ್ಲಿ ಹುಡುಗರು ಕಾಡುಕುದುರೆಯ ಬಗ್ಗೆ ಮೇಳವಾಗಿ ಹಾಡಿಕೊಂಡು ಕುಣಿಯುತ್ತಿದ್ದು ಅದು ಹಿನ್ನೆಲೆಯಲ್ಲಿ ಕೇಳಿಸುತ್ತದೆ. ತುಸುಹೊತ್ತು ತಡೆದು ಚಂಪಿ ತನ್ನ ಆಭರಣಗಳನ್ನು ಕಳಚಲಾರಂಭಿಸುತ್ತಾಳೆ, ಅಷ್ಟರಲ್ಲಿ ದುರ್ಗಿ ಬರುತ್ತಾಳೆ.)

ದುರ್ಗಿ — ತಗೀಬ್ಯಾಡ ತಡೀಯೋ ಎವ್ವಾ ! ಈ ಸೀರಿ, ಈ ದಾಗೀನದಾಗ ನೀ ಎಷ್ಟು ಚಂದ ಕಾಣಸ್ತಿ ಗೊತ್ತೈತಿ ? ನೀ ಏನs ಅನ್ನು, ನಾ ಅಂತೂ ಆ ಹುಡುಗನ ನಶೀಬಂತೀನಿ. ನೀ ಏನಂತಿ ?

ಚಂಪಿ — ನೀ ಹೋಗಿ ಮಲಕ್ಕೊ ಅಂತೀನಿ.

ದುರ್ಗಿ — ಛೀ ಇನ್ನs ನಿನ್ನ ಸಿಟ್ಟು ಹೋಗೇ ಇಲ್ಲ. ನನಗಂತೂ ಬಿಡೋವಷ್ಟು ಆನಂದ ಆಗೇತಿ. ನಶೀಬಂತೀಯೋ ಅಲ್ಲಂತೀಯೋ ಹೇಳಲ್ಲ,—ನಿನಗಿಂತ ಶೀಲಕ್ಕ ದೊಡ್ಡಾಕಿ, ಆಕೀದs ಮದಿವಿಲ್ಲ, ನಿಂದ ಆಗಿಬಿಟ್ಟಿತಂದರ.... !....

ಚಂಪಿ — ದುರ್ಗಿ, ಸಂಜೀತನಕ ಓಡ್ಯಾಡಿ ದಣದೀದಿ, ಮಲಕ್ಕೊಬಾರದ ?

ಹುಡುಗರ ಹಾಡು — ಕಾಡು ಕುದರಿ ಓಡಿ ಬಂದಿತ್ತs ॥

ಊರಿನಾಚೆ ದೂರದಾರಿ
ಸುರುವಾಗೊ ಜಾಗದಲ್ಲಿ ।
ಮೂಡಬೆಟ್ಟ ಸೂರ್ಯ ಹುಟ್ಟಿ
ಹಸರಿನ ಗುಟ್ಟ ಒಡೆವಲ್ಲಿ ।
ಮುಗಿವೇ ಇಲ್ಲದ
ಮುಗಿಲಿನಿಂದ ।
ಜಾರಿಬಿದ್ದ ಉಲ್ಕೀಹಾಂಗ ।
ಕಾಡಿನಿಂದ ಚಂಗನೆ ನೆಗೆದಿತ್ತ ॥

ದುರ್ಗಿ ಅದೂ ಖರೆ. ಇಂದಂತೂ ಖರೆ ಹೇಳ್ತೇನಿ ಚಂಪಕ್ಕಾ, ಕಣ್ತುಂಬ ನಿದ್ದಿ ಬರತೈತಿ ನನಗ. ಶೀಲಕ್ಕನ ನಶೀಬ ಆಕೀ ಹಲ್ಲಿನ್ಹಾಂಗs, ಭಾಳ ಖೊಟ್ಟಿ. ಮನಿಶಾನ ಮನಸ ಹಸನ ಇರಬೇಕು ಮಂಗಳs, ಹೊಟ್ಟೇಕಿಚ್ಚ ಮಾಡಿದರ ಏನ ಬಂತು ? ನಶೀಬ ಕಸಕೊಳ್ಳಾಕ ಬರತೈತಿ ? ನಾಳಿ ಯಾವಾಗ ಬೆಳಕ ಹರದೀತೋ, ಯಾವಾಗ ನೀ ಧಾರೀ ಎರಕೊಂಡೀಯೋ ಅಂತ ಮನಸ ಹರದಾಡಾಕ ಹತ್ತೇತಿ.

ಚಂಪಿ ಎಲ್ಲರೂ ಮಲಗ್ಯಾರ, ನೀನೂ ಹೋಗಲ್ಲ.

ದುರ್ಗಿ ಯಾಕ ಹಿಂಗ ಆವಸರ ಮಾಡ್ತಿ ? ನಾಳಿ ಹಿಂಗ ಒಬ್ಬಾಕೀನs ಸಿಗತಿ ?

ಚಂಪಿ ನಾ ಎಲ್ಲಿ ಹೋಗತೀನಿ ?

ದುರ್ಗಿ ಎಲ್ಲಿ ಗೊತ್ತಿಲ್ಲ ? ನಾಳಿ ಇಷ್ಟೊತ್ತಿನಾಗ ಗಂಡನ ತೆಕ್ಕ್ಯಾಗ ಇರತಿ !

ಚಂಪಿ : ಥೂ....

(ದುರ್ಗಿ ನಗುವಳು. ಹಿನ್ನೆಲೆ ಹಾಡು ಕೇಳಿಸುವುದು.)

ಮೈಯು ಬೆಂಕಿ ಮಿರಗತಿತ್ತ
ಬ್ಯಾಸಿಗಿ ಬಿಸಿಲ ಉಸಿರಾಡಿತ್ತ ।
ಹೊತ್ತಿ ಉರಿಯೊ ಕೇಶರಾಶಿ
ಕತ್ತಿನಾಗ ಕುಣೇತಿತ್ತ ।
ಧೂಮಕೇತು
ಹಿಂಬಾಲಿತ್ತ
ಹೌಹಾರಿತ್ತ ಹರಿದಾಡಿತ್ತ
ಹೈ ಹೈ ಅಂತ ಹಾರಿ ಬಂದಿತ್ತ ॥

ದುರ್ಗಿ : ಮದಿವೆಂದರ ಏನಂತ ತಿಳಕೊಂಡೇ ಮಗಳ ? ಒಂದ ಗಂಡಸು, ಒಂದ ಹೆಂಗಸು, ಒಂದು ಘಮಘಮಾ ನಾರೋ ಹಾಸಿಗಿ ! ಮಲಗಿ ಬೆಳಿಗ್ಗೆದ್ದರ ಮೈ ಎಷ್ಟ ಹಗರ ಆಗಿರತೈತಿ ಗೊತ್ತಾ ?

ಚಂಪಿ : ನಾ ಮಲಗತೀನಿ.

ದುರ್ಗಿ : ಮಲಗು ಮಲಗು. ನಿನಗ ನಿದ್ದಿ ಬರಾಣೆಲ್ಲಂತ ನನಗೂ ಗೊತ್ತೈತಿ, ಮಲಗು. ಕನಸ ಬಿದ್ದರ ನಾಳಿ ನನಗೂ ಹೇಳಬೇಕs ಮತ್ತ !

(ನಗುತ್ತ ಹೊರಡುವಳು. ಏನೋ ನೆನಪಾಗಿ ಮತ್ತೆ ನಿಲ್ಲುವಳು.)

ಅಂಥಾಂಗ ಹುಲಿಗೊಂಡ ಹರಕ ಅಂಗೀ ಹಾಕಿದ್ನಲ್ಲ, ಯಾಕಂತ ?

ಚಂಪಿ : ನನಗೇನ ಗೊತ್ತು ?

ದುರ್ಗಿ : (ತಂತಾನೇ ಮಾತಾಡಿಕೊಂಡು ಹೊರಡುವಳು.)

ವಿಚಿತ್ರ ಹುಡುಗ, ಬರೀ ತನ್ನ ಹಟಾನs ಗೆಲ್ಲಬೇಕಂದರ ಹೆಂಗ ? ಆಯ್ತು, ಇದೊಂದ ಮದಿವ್ಯಾದರ ತಾನs ಹಾದೀ ಹಿಡೀತಾನ. ಆ ಹುಡುಗೋರ ಜೋಡೀ ಹಾಡಿಕೊಂಡ ಕುಣ್ಯಾಕ ಹತ್ಯಾನೋ ಏನೊ. ಈ ಹಾಡಂದರ ಭಲೇ ಖುಶಿ ಅವಗ. ಬೆಳಗಿನಿಂದ ಯಾರ ಜೋಡೀ ಮಾತಾಡಿಲ್ಲ, ಹಿಂಗಾದರೂ ಖುಶಿ ಆಗಲಿ ಮಾರಾಯುಗ.

(ಹೋಗಿ ದುರ್ಗಿ ಮಲಗುವಳು. ಹಾಡು ಈಗ ಇನ್ನೂ ಹತ್ತಿರ ವಾಗುತ್ತದೆ.)

ಕಣ್ಣಿನಾಗ ಸಣ್ಣ ಖಡ್ಗ
ಆಸುಪಾಸು ಝಳಪಿಸಿತ್ತ ।
ಬೆನ್ನಹುರಿ ಬಿಗಿದಿತ್ತಣ್ಣ
ಸೊಂಟದ ಬುಗುರಿ ತಿರಗತಿತ್ತ !
ಬಿಗಿದ ಕಾಡ
ಬಿಲ್ಲಿನಿಂದ ।
ಬಿಟ್ಟ ಬಾಣಧಾಂಗ ಚಿಮ್ಮಿ ।
ಹದ್ದಮೀರಿ ಹಾರಿ ಬಂದಿತ್ತ ॥

ನೆಲ ಒದ್ದು ಗುದ್ದ ತೋಡಿ
ಗುದ್ದಿನ ಬದ್ದಿ ಒದ್ದಿಯಾಗಿ ।
ಒರತೀ ನೀರು ಭರ್ತಿಯಾಗಿ
ಹರಿಯೋ ಹಾಂಗ ಹೆಜ್ಜೀ ಹಾಕಿ ।
ಹತ್ತಿದವರ
ಎತ್ತಿಕೊಂಡು

ಏಳಕೊಳ್ಳ ತಿಳ್ಳೀ ಆಡಿ ।
ಕಳ್ಳಿಮಳ್ಳಿ ಆಡಿಸಿ ಕೆಡಿವಿತ್ತ ॥

(ಮೇಲಿನ ಹಾಡು ಮುಗಿಯುವತನಕ ಚಂಪಿ ಆಭರಣಗಳನ್ನು ಬಿಚ್ಚಿ ಚೆಲ್ಲಿ ಹೊರಡಲು ತಯಾರಾಗುವುದು, ಬೇರೆಯವರು ಮಲಗಿದ್ದರ ಬಗ್ಗೆ ಅನುಮಾನಗೊಳ್ಳುವುದು, ನೋಡಿ ಖಾತ್ರಿ ಮಾಡಿಕೊಳ್ಳುವುದು—ನಡೆದೇ ಇರುತ್ತದೆ. ಒಂದು ಸಲ ಪಾರೋತಿ, ಶೀಲಿಯರ ರೂಮುಗಳಲ್ಲಿ ಇಣಿಕಿ ಅವರಿಬ್ಬರೂ ಮಲಗಿದ್ದನ್ನು ಖಾತ್ರಿಮಾಡಿಕೊಳ್ಳುತ್ತಾಳೆ. ಅಷ್ಟರಲ್ಲಿ ಹಾಡು ಮುಗಿದು ಕುದುರೆಯ ಹೇಷಾರವ ಕೇಳಿಸುತ್ತದೆ. ಈಗ ಎಲ್ಲ ನಿಶ್ಯಬ್ದವಾಗಿದೆ. ಮೆಲ್ಲಗೆ ಬಾಗಿಲ ಕಡೆಗೆ ಹೆಜ್ಜೆ ಹಾಕುತ್ತಾಳೆ. ಬಾಗಿಲು ತೆಗೆದು ಇನ್ನೇನು ಹೊರಡಬೇಕು, ಅಷ್ಟರಲ್ಲಿ ಹಿಂದಿನಿಂದ 'ಚಂಪೀ' ಎಂದದ್ದು ಕೇಳಿಸಿ ಬೆಚ್ಚಿ ಬೀಳುತ್ತಾಳೆ, ಹಿಂದಿನಿಂದ ಶೀಲಕ್ಕ ಕಾಣಿಸಿಕೊಳ್ಳುತ್ತಾಳೆ.)

ಶೀಲಕ್ಕ : ನೀ ಎಲ್ಲಿಗಿ ಹೊಂಟೀಯಂತ ನನಗೊತ್ತು.

ಚಂಪಿ : ಗೊತ್ತಿದ್ದರ ಆಯ್ತಲ್ಲ, ನಾಳೆ ಎಲ್ಲಾರಿಗು ಹೇಳು.

ಶೀಲಕ್ಕ : ಮಾವನ ಜೋಡಿ ಹೋಗಬ್ಯಾಡ.

ಚಂಪಿ : ಯಾಕ ? ನೀ ಹೋಗಬೇಕಂತೀಯೇನು ?

ಶೀಲಕ್ಕ : ಅವ ನಮ್ಮಿಬ್ಬರ ಅಕ್ಕನ ಗಂಡ.

ಚಂಪಿ : ಅಂದು ರಾತ್ರಿ ಮಾವನ ಹಂತ್ಯಾಕ ಹೋಗಿದ್ದೆಲ್ಲ, ಅಕ್ಕನ ಗಂಡಂತ ತಿಳೀಲಿಲ್ಲಾ ನಿನಗ ? ಯಾಕ ಹೋಗಿದ್ದಿ ಹೇಳಲಿ? —ನಿನಗೂ ಮಾವ ಬೇಕು. ಅಕ್ಕಾ, ಶೀಲಕ್ಕಾ,—ಆದರೇನ ಮಾಡ್ಲಿ, ಕುದರಿಗಿ ನಿನ್ನ ಕಂಡರ ಆಗಿ ಬರಾಣಿಲ್ಲ. ನನ್ನ ಕಂಡರ ಬೆನ್ನ ಹುರಿ ಬಗೀ ಮಾಡಿ ಕರೀತೈತಿ. ಅದಕ್ಕs ಹೊಸಾ ಸೀರಿ ಉಟಕೊಂಡ ಮಾವನ ಮನೀಗಿ ಹೊಂಟೇನಿ. ಅವ್ವಾ ಮಲಗ್ಯಾಳಲ್ಲಾ, ನೀನs ಅವ್ವಂತ ತಿಳಕೊಂಡು ಅಲ್ಲಾ ಬೆಲ್ಲಾ ಕೊಟ್ಟ ಕಳಿಸಿಕೊಡು.

ಶೀಲಕ್ಕ : ಬೀಗರ ಬಿಡಾರ, ತಿಳೀಬಾರದ ? ಹಿಂದ ಆದದ್ದಾಯ್ತು, ಪಾರೋತೀ ಮುಖಾನಾದರೂ ನೋಡು. ಪಾರೋತಿ ನಮ್ಮಕ್ಕ!

ಚಂಪಿ : ಔಷದಿ ಬಾಟ್ಲೀಹಾಂಗ ನಾರತಾಳ, ಮಾವ ಆಕೀ ಸಲುವಾಗಿ ಇಲ್ಲಿದ್ದಾನಂತ ತಿಳದೀಯೇನು ? ಮಾವ ನನ್ನ ಹಕ್ಕು— ಅವ ಕುದರೀ ಪಳಗಿಸಿದ್ದು ನನ್ನ ಸಲುವಾಗಿ. ಇಷ್ಟದಿನ ಅಕ್ಕ ತಂಗೀ ಅಂತ ಅಂಜತಿದ್ದೆ. ಇಂದ ನನಗ ಬಲ ಬಂದೈತಿ. ನನ್ನ ಹಕ್ಕಿಂದೇನೈತೋ ಅದನ್ನ ಪಡದsa ಪಡೀತೀನಿ. ನನ್ನ ತಡ್ಯಾಕ ೦ ಯಾರಿಗೂ ಶಕ್ಕಿಲ್ಲ.

ಶೀಲಕ್ಕ ನಾ ನಿನ್ನ ಬಿಡೋದಿಲ್ಲ, ಅಧೆಂಗ ಹೋಗ್ತೀಯೋ ನೋಡೇ ಬಿಡ್ತೀನಿ.

(ಅಡ್ಡಗಟ್ಟುವಳು.)

ಚಂಪಿ ಮಾವ ಕಾಡಕುದರಿ ಪಳಗಿಸ್ಯಾನ. ನಾ ಅವನ್ನ ಪಳಗಿಸೀನಿ– ತಿಳಕೊ.

(ಎನ್ನುತ್ತ ಶೀಲಕ್ಕನನ್ನು ದಬ್ಬಿ ಹೊರಗೆ ಹೋಗುವಳು. ಹೋಗಿ ಹೊರಗಿನಿಂದ ಚಿಲಕ ಹಾಕಿಕೊಳ್ಳುವಳು. ಶೀಲಕ್ಕ ಓಡಿಬಂದು ಬಾಗಿಲು ತೆರೆಯಲು ಯತ್ನಿಸುತ್ತ)

ಶೀಲಕ್ಕ : ಎವ್ವಾ, ಎವ್ವಾ, ಚಂಪಿ ಮಾವನ ಜೋಡೀ ಓಡಿ ಹೊಂಟಾಳ ! ಎವ್ವಾ ! ಎವ್ವಾ !

(ಗೌಡ್ತಿ ಎಚ್ಚರಾಗಿ ಏಳುತ್ತಾಳೆ. ಶೀಲಕ್ಕ ಗೌಡ್ತಿಯ ಬಳಿಗೆ ಓಡಿಹೋಗುತ್ತಾಳೆ.)

ಗೌಡ್ತಿ : ಏನೇ ಅದು ?

ಶೀಲಕ್ಕ : ಎವ್ವಾ, ಎವ್ವಾ, ಚಂಪಿ ಮಾವನ ಜೋಡೀ ಓಡಿಹೊಂಟಾಳ ! (ಗೌಡ್ತಿ ತಕ್ಷಣ ಬಂದೂಕು ತೆಗೆದುಕೊಂಡು ಅವಸರದಿಂದ ಓಡಿ ಬರುವಳು. ಇಬ್ಬರೂ ಜೋರಿನಿಂದ ಬಾಗಿಲು ತೆಗೆಯಲೆತ್ನಿಸುವರು. ಅದು ತೆರೆಯುವುದಿಲ್ಲ. ತಕ್ಷಣ ಗೌಡ್ತಿ ಮೆಟ್ಟಿಲು ಹತ್ತಿ ಶೀಲಕ್ಕನ ರೂಮಿನ ಮುಂಭಾಗದಲ್ಲಿ ಹೊರಗನ್ನು ಎದುರಿಸಿ ನಿಲ್ಲುವಳು. ಈ ಮಧ್ಯೆ ದುರ್ಗಿಗೂ ಎಚ್ಚರವಾಗಿ ಅವಳೂ ಅಟ್ಟದ ಮೇಲೆ ಹೋಗುವಳು.)

ಗೌಡ್ತಿ : ಏ ಹುಲಿಗೊಂಡಾ...

ಹುಲಿಗೊಂಡ : (ಹೊರಗಿನಿಂದ)

| | |
|---|---|
| | ಎವ್ವಾ ಗೌಡ್ತಿ, ನಿನ್ನ ಹಿರೀಮಗಳೂ ಬ್ಯಾಡ. ನಿನ್ನ ಆಸ್ತಿ ಪಾಸ್ತೀನೂ ಬ್ಯಾಡ, ಮ್ಯಾಲ ನಿನ್ನ ಗೌಡ್ಕೀನೂ ಬ್ಯಾಡ. ನನಗ ನನ್ನ ಹೆಂತಿ ಸಿಕ್ಕಾಳ, ಹೊಂಟೇವ್ರೀ ಎವ್ವ ! ... |
| ಗೌಡ್ತಿ | ಬದ್ಮಾಸ್ ಭಾಡ್ಯಾ, ಕೈಯಾಗೇನೈತಿ ನೋಡಿಲ್ಲಿ. ಚಂಪೀನ ಕೆಳಗಿಳಿಸಿ ನೀ ಅದೆಲ್ಲಿ ಹಾಳಾಗಿ ಹೋಗ್ತಿ ಹೋಗು. ಏ ಚಂಪೀ, ಇಳದ ಬಾರೇ ... |
| ದುರ್ಗಿ | ಎವ್ವಾ ಚಂಪಕ್ಕಾ, ಹಾಂಗ ಮಾಡಬ್ಯಾಡ ಇಳದ ಬಾ ಮಗಳs |
| ಚಂಪಿ | (ಹೊರಗಿನಿಂದ) ನಾ ಬರಾಣಿಲ್ಲಾ. |
| ಗೌಡ್ತಿ | ಇಷ್ಟ ಧೈರ್ಯ ಬಂತೇನs ನಿನಗ ? ಏ ಹುಲಿಗೊಂಡಾ |
| | (ಬಂದೂಕು ಗುರಿ ಹಿಡಿಯುತ್ತ) |
| | ಗುಂಡಿಗಿ ಬಲಿ ಆಗಬ್ಯಾಡ, ಹೇಳಿರತೀನಿ. |
| ದುರ್ಗಿ | ಎವ್ವಾ ಚಂಪಕ್ಕಾ, ಅಪ್ಪಾ ಹುಲಿಗೊಂಡಾ ನನ್ನ ಮಾತ ಕೇಳ್ರಿ ... |
| ಹುಲಿಗೊಂಡ | (ಹೊರಗಿನಿಂದ) ಬರ್ತೀವಿ, ಶರಣ್ರೀಯೆವ್ವ |
| ಗೌಡ್ತಿ | ಏ ಹುಲಿಗೊಂಡಾ ... |
| ದುರ್ಗಿ | ಚಂಪಕ್ಕಾ ... |
| | (ಗೌಡ್ತಿ ಗುಂಡು ಹಾರಿಸುವಳು. ತಕ್ಷಣ ಕುದುರೆ ದೌಡಾಯಿಸಿದ ಸಪ್ಪಳ ಕೇಳಿಸುತ್ತದೆ. ಗುಂಡಿನ ಸಪ್ಪಳಕ್ಕೆ ದುರ್ಗಿ ಕುಸಿಯುವಳು. ಶೀಲಕ್ಕ ಕಣ್ಣು ಮುಚ್ಚಿಕೊಳ್ಳುವಳು. ತನ್ನ ರೂಮಿನಲ್ಲಿ ಮಲಗಿದ್ದ ಪಾರೋತಿ 'ಎವ್ವಾs' ಎಂದು ಕಿಟಾರನೆ ಕಿರಿಚಿ ಬೆದರಿದ ಎಳೆಗರುವಿನಂತೆ ದಿಕ್ಕು ತಪ್ಪಿ ಎದ್ದು ನೋಡಾಡಿ ಮೇಲಕ್ಕೆ ಹೋಗುವಳು. ತುಸು ಹೊತ್ತು ನೀರವ. ಪಾರೋತಿ ಆಘಾತದಲ್ಲಿದ್ದ ಎಲ್ಲರನ್ನು ಗಾಬರಿಯಿಂದ ನೋಡುತ್ತ ಶೀಲೀ, ದುರ್ಗೀ, ಎಂದು ಮಾತಾಡಿಸುತ್ತ 'ಎವ್ವಾs' ಎಂದು ತನ್ನ ತಾಯಿಯ ಬಳಿಗೆ ಹೋಗುವಳು. ಆಘಾತದಲ್ಲಿ ಕಲ್ಲಿನಂತೆ ನಿಂತಿದ್ದ ಅವಳನ್ನು ಅಲುಗಿಸುತ್ತ ಮಾತಾಡಿಸುವಳು ) |

ಪಾರೋತಿ : ಎವ್ವಾ, ಎವ್ವಾ ! ಏನಾಯ್ತು ? ಯಾಕ ಯಾರೂ ಬಾಯಿ ಬಿಡವೊಲ್ಲಿರಿ ? ಎವ್ವಾ ಏನಾಯ್ತುಬೇ?

ಗೌಡ್ತಿ : ಗುರಿ ತಪ್ಪಿತ್s ಮಗಳs !....

(ಎನ್ನುತ್ತ ಗೌಡ್ತಿ ಕುಸಿಯುವಳು. ಆಸೆಯಿಂದ ದುರ್ಗಿ ಗೌಡ್ತಿಯನ್ನೇ ನೋಡುತ್ತಿರುವಾಗ)

ತೆರೆ

# ರಂಗ ವಿನ್ಯಾಸ

ಕಾರಿಡಾರ್

ಶೀಲಕ್ಕನ ಕೋಣೆ

ಅಡಿಗೆ ಮನೆ

ಮೆಟ್ಟಿಲು

ಪಡಸಾಲೆ

ಪಾರೋತಿಯ ಕೋಣೆ

ಚಂಪಿಯ ಕೋಣೆ

ಹೊರಬಾಗಿಲು

ಕಂಬಾರ ಬರೆಯುವಂಥ ನಾಟಕವಾಗಲಿ, ಪದ್ಯಗಳಾಗಲಿ ಖಂಡಿತ ಪಾಶ್ಚಾತ್ಯರಲ್ಲೂ ಇಲ್ಲ.

-ಯು. ಆರ್. ಅನಂತಮೂರ್ತಿ

......ಕನ್ನಡದಲ್ಲೇ ಅಲ್ಲ, ಇಡೀ ದೇಶದಲ್ಲಿ ಕಂಬಾರರಷ್ಟು ತೀವ್ರವಾಗಿ ನೆಲದ ವಾಸನೆ ತುಂಬಿಕೊಂಡು ಜತೆಯಲ್ಲಿ ನವ್ಯತೆ-ಆಧುನಿಕತೆಗಳನ್ನು ಮೈಗೂಡಿಸಿ ಕೊಂಡಿರುವ ಸೃಜನಶೀಲ ನಾಟಕಕಾರ ಸಿಗುವುದು ದುರ್ಲಭ.

ನನ್ನ ಅಭಿಪ್ರಾಯದಲ್ಲಿ ದೇಶದ ಇಂದಿನ ಎಲ್ಲಾ ನಾಟಕಕಾರರ ನಡುವೆ ಕಂಬಾರರು ಅದ್ವಿತೀಯರು. ಅವರ ಜಾಗದಲ್ಲಿ ಇನ್ನೊಬ್ಬರನ್ನು ಯೋಚಿಸುವುದೂ ನನಗಂತೂ ಸಾಧ್ಯವಿಲ್ಲ.

—ಬಿ. ವಿ. ಕಾರಂತ

ಕಂಬಾರರ ನಾಟಕಗಳಿಗೆ ಸಮರ್ಥ ಭಾಷೆಯ ಜೊತೆಗೆ ಧ್ವನಿಪೂರ್ಣವಾದ ಕ್ರಿಯೆಯ ಬೆನ್ನೆಲುಬೂ ಇರುತ್ತದೆ. ಅವರ ನಾಟಕಗಳನ್ನು ಓದುವಾಗ ಕೂಡ ಅವುಗಳ ಆಂತರಿಕ ಕ್ರಿಯೆ ತಾನಾಗಿಯೇ ಕಣ್ಣಿಗೆ ಕಟ್ಟುತ್ತದೆ.

—ಗಿರೀಶ ಕಾರ್ನಾಡ